CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ನವೆಂಬರ್ ೧೦, ೨೦೦೫ (ಕಾರ್ತಿಕ ೧೯, ಶಕ ವರ್ಷ ೧೯೨೭) | ಸಂಚಿಕೆ ೪೪ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆ
ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರ ಕಛೇರಿ,
ಕಾರ್ಮಿಕ ಭವನ, 2ನೇ ಮಹಡಿ, ಬನ್ನೇರುಘಟ್ಟ ರಸ್ತೆ, ಬೆಂಗಳೂರು–29

ಅಧಿಸೂಚನೆ

ಸಂಖ್ಯೆ: ಡಿಎಫ್‌ಬಿ/ಬಿಎಲ್‌ಆರ್/ಬಿಓಇ/ಮಿಸ್ಸಿ/ಸಿಆರ್–01/05–06, ದಿನಾಂಕ: 26ನೇ ಸೆಪ್ಟೆಂಬರ್ 2005

**ವಿಷಯ:** ಇಲಾಖೆಯು 2005ನೇ ಸಾಲಿನ ಜುಲೈ ಮತ್ತು ಸೆಪ್ಟೆಂಬರ್ ತಿಂಗಳಿನಲ್ಲಿ ನಡೆಸಿದ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳ ಪಟ್ಟಿ ಪ್ರಕಟಣೆ ಬಗ್ಗೆ.

**ಉಲ್ಲೇಖ:** 1) ಸರ್ಕಾರದ ಅಧಿಸೂಚನೆ ಕಾಇ 50 ಕಾಬಾಸೇ 2002, ದಿನಾಂಕ: 11.09.2002.
2) ಈ ಕಛೇರಿಯ ಪತ್ರ ಸಂಖ್ಯೆ: ಡಿಎಫ್‌ಬಿ/ಬಿಎಲ್‌ಆರ್/ಬಿಓಇ/ಮಿಸ್ಸಿ/ಸಿಆರ್–01/05–06, ದಿನಾಂಕ: 06.04.2005.

ಉಲ್ಲೇಖದಲ್ಲಿ ಸೂಚಿಸಿರುವ ಸರ್ಕಾರದ ಅಧಿಸೂಚನೆಯಲ್ಲಿ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆ ಮಂಡಳಿಯನ್ನು ರಚಿಸಲಾಗಿದೆ. ಕರ್ನಾಟಕ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ 1959ರ ಅನ್ವಯ ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶಕರು, ಬೆಂಗಳೂರು ರವರ ಅಧ್ಯಕ್ಷತೆಯಲ್ಲಿ 2005ನೇ ಸಾಲಿನ ಜುಲೈ ಮತ್ತು ಸೆಪ್ಟೆಂಬರ್ ತಿಂಗಳಿನಲ್ಲಿ ಬೆಂಗಳೂರಿನಲ್ಲಿ ಬಾಯ್ಲರ್ ಆಪರೇಷನ್ ಇಂಜಿನಿಯರ್ಸ್ ಪರೀಕ್ಷೆಯನ್ನು ನಡೆಸಲಾಗಿದೆ. ಈ ಪರೀಕ್ಷೆಯಲ್ಲಿ ತೇರ್ಗಡೆಯಾದ ಅಭ್ಯರ್ಥಿಗಳ ಹೆಸರುಗಳನ್ನು ನಿಯಮ 40 ರಂತೆ ಗೆಜೆಟ್‌ನಲ್ಲಿ ಪ್ರಕಟಿಸಬೇಕಾದ ಹಿನ್ನೆಲೆಯಲ್ಲಿ ಕೆಳಗೆ ಕಾಣಿಸಿದ ಅಭ್ಯರ್ಥಿಗಳು ತೇರ್ಗಡೆಯಾಗಿರುತ್ತಾರೆ ಎಂದು ಈ ಮೂಲಕ ಘೋಷಿಸಿದೆ.

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>**ಶ್ರೀ/ಶ್ರೀಮತಿ:** |
|---|---|---|
| 1 | 1 | ಆದಿನಾಥ್ ಆರ್. ಚಾವಜ್, C/o ಎಂ.ಎನ್. ಚವಾಜ್, ಅಂಚೆ: ತೆರದಾಳ (ಕಿಲ್ಲಭಾಗ್), ಜಮಖಂಡಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 2 | 2 | ಅಕಿನೇನಿ ನವೀನ್ ಕುಮಾರ್, S/o ಎ.ಜಿ.ವಿ. ಪ್ರಸಾದ್ ಕ್ವಾರ್ಟರ್ಸ್, ನಂ. ಕ್ಯೂ–13, ನೇವನಗರ, ಎಸ್‌ಎಐಎಲ್ ಕ್ಯಾಂಪಸ್ ಅಂಚೆ–507 154, ಕಮ್ಮಮ್ ಜಿಲ್ಲೆ, ಆಂಧ್ರ ಪ್ರದೇಶ. |
| 3 | 4 | ಅಮೀನ್ ಬಾಬು ಕಂದಗಲ್, C/o ಬಿ.ಎ. ಕಂದಗಲ್, ಬಿ.ಎಸ್., ಕಾಂಪೌಂಡ್, ಪಿ.ಯು. ಕಾಲೇಜ್, ಅಂಚೆ ಬೆಡ್ಕಿಹಾಳ್–591 214, ಚಿಕ್ಕೋಡಿ ತಾಲ್ಲೂಕು, ಬೆಳಗಾಂ ಜಿಲ್ಲೆ, |
| 4 | 5 | ಅಮಿತ್ ಪ್ರಿಯ, ಪ್ಲಾಟ್ ನಂ. ಬಿ–403, ಕ್ರೇಸ್ಟ್ ಅಪಾರ್ಟ್‌ಮೆಂಟ್, ಅನ್ನೆಗುಂದಿ ರಸ್ತೆ, ಬಿಜೈ, ಮಂಗಳೂರು. |
| 5 | 8 | ಅಪ್ಪಾರಾವ್ ಎನ್. ಪಾಟೀಲ್, ಟಿಆರ್‌ಟಿ 58/3, ಎಸಿಸಿ ಕಾಲೋನಿ, ವಾಡಿ (ಜಂಕ್ಷನ್), ಗುಲ್ಬರ್ಗಾ–585 225. |
| 6 | 12 | ಅಶ್ವತ್ಥ ನಾರಾಯಣ ಬಿ.ಟಿ, ಅಶ್ವಿಜ, ದ್ವಾರಕ ನಗರ ಕುಲೈ, ಮಂಗಳೂರು. |

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>ಶ್ರೀ/ಶ್ರೀಮತಿ: |
|---|---|---|
| 7 | 13 | ಬಾಹುಬಲಿ ಚಂದ್ರಕಾಂತ್ ಉಪಾಧ್ಯೆ, ಅಂಚೆ: ಭರತೇಶ್ ವಿದ್ಯಾಲಯ ಬೆಳ್ಳಾಡ್, ಬಾಗೇವಾಡಿ, ಹುಕ್ಕೇರಿ ತಾಲ್ಲೂಕು, ಬೆಳಗಾಂ ಜಿಲ್ಲೆ. |
| 8 | 15 | ಬಾಲಸಾಹೇಬ ಆತ್ಮರಾಮ್ ಪಾಟೀಲ್, ಎ.ಎಫ್.ಎಸ್.ಎಫ್. ಲಿಮಿಟೆಡ್, ವಿಷ್ಣುಅಣ್ಣಾನಗರ್, ಅಂಚೆ–ನವಲಿ ಹಾಲ್, ಅಥಣಿ, ಬೆಳಗಾಂ. |
| 9 | 17 | ಬಸವರಾಜ್ ಎಲ್. ಮಲ್ಲಾಪುರ್, C/o ಕುಂಟೋಜಿ ಬಿಲ್ಡಿಂಗ್, ಬಸವನಗರ ಮಹಾಲಿಂಗಪುರ, ಮುಧೋಳ್, ಬಾಗಲಕೋಟೆ ಜಿಲ್ಲೆ. |
| 10 | 18 | ಭಗವಾನ್ ಪಿ.ವಿ.ವಿ.ಎಸ್.ಕೆ, S/o ಪಿ.ಪಿ. ರಾಮಯ್ಯ, ಏತ್‌ಪುಡಿ (ಅಂಚೆ), ದ್ರಾಕ್ಷವಾಮ (Via)–533 262. ಈಸ್ಟ್ ಗೋದಾವರಿ ಜಿಲ್ಲೆ, ಆಂಧ್ರಪ್ರದೇಶ. |
| 11 | 19 | ಭರಮಣ್ಣನವರ್, ಬಿ.ಕೆ., ಅಂಚೆ: ಕಣ್ಣೂರು, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ. |
| 12 | 21 | ಭರತ್ ಅಪ್ಪಾಸಾಹೇಬ ಶೆಟ್ಟಿ, ಉಗಾರ್ ರೈಲ್ವೆ ಸ್ಟೇಷನ್ ಹತ್ತಿರ, ಅಂಚೆ: ಉಗಾರ್‌ಖುರ್ದ್:–591316, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ. |
| 13 | 23 | ಭೋಸಲೆ ಎನ್.ಪಿ., ಅಂಚೆ: ಸಿದ್ದವಾಡಿ, ಭೋಸಲೆ ಮಾಲ, ಅಥಣಿ ತಾಲ್ಲೂಕು–591232, ಬೆಳಗಾಂ ಜಿಲ್ಲೆ. |
| 14 | 25 | ಚಂದರ್ ಮಣಿ, ಎಂಆರ್‌ಪಿಎಲ್ ಕಾಲೋನಿ, ಅಂಚೆ: ಬಾಲ, ಕಾಟಿಪಲ್ಲ, ಮಂಗಳೂರು. |
| 15 | 26 | ಚಾಂಡಿವಿ ಬಾಲ ರೆಡ್ಡಿ, S/o ರಾಮರೆಡ್ಡಿ, ಅಂಚೆ: ಪೆದ್ದಗುಂಟ ವೆಟ್ಟಿ, ದುಬ್ಬಾಕ್ (ಎಂ), ಮೇದಕ್ ಜಿಲ್ಲೆ, ಆಂಧ್ರಪ್ರದೇಶ. |
| 16 | 27 | ಚಂದ್ರಕಾಂತ್ ನರಸಿಂಗರಾವ್ ಪಾಟೀಲ್, ಅಥಣಿ ಫಾರ್ಮರ್ಸ್ ಶುಗರ್ ಫ್ಯಾಕ್ಟರಿ ಲಿಮಿಟೆಡ್, ನವಳಿಹಾಳ–591 234, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ. |
| 17 | 30 | ಚಂದ್ರಶೇಖರ ಕುಮಾರ್, ಡಿ.ಆರ್.ಟಿ. 5/53, ಬಂಗಾರುನಗರ, ದಾಂಡೇಲಿ–581325 (ಉತ್ತರ ಕನ್ನಡ), ಕರ್ನಾಟಕ. |
| 18 | 32 | ಚಂದ್ರಶೇಖರ ಆರ್, ಡಿ 1/8, ಗ್ರೇಸಿಂ ಸ್ಟಾಫ್ ಕಾಲೋನಿ, ಕುಮಾರಪಟ್ಟಣಂ–581 123, ಹಾವೇರಿ ಜಿಲ್ಲೆ. |
| 19 | 34 | ಚೆಂಚು ರಾಮಯ್ಯ ಜಿ, C/o ಬಿ.ಪಿ. ಚಂದ್ರಮೋಹನ, ವಿದ್ಯಾಗಿರಿ ನಿಲಯ, ಸದಾಶಿವ ನಗರ, ಸಿರುಗುಪ್ಪ (ತಾಲ್ಲೂಕು ಮತ್ತು ಅಂಚೆ)–583121, ಬಳ್ಳಾರಿ. |
| 20 | 35 | ಚಿದಂಬರ ಎಸ್, ನಂ.2570, 1ನೇ ಅಡ್ಡರಸ್ತೆ ಎಕ್ಸ್‌ಟೆನ್ಷನ್, ಆರ್.ಪಿ. ರಸ್ತೆ, ನಂಜನಗೂಡು–571 301, ಮೈಸೂರು. |
| 21 | 36 | ದರಪುರೆಡ್ಡಿ ತ್ರಿನೇಥ, C/o ವೈ. ಪೂರ್ಣ ಚಂದ್ರರಾವ್, ಶಿವಾಲಯಂ ಹತ್ತಿರ, ಪಮರು–521 157, ಕೃಷ್ಣ ಜಿಲ್ಲೆ, ಆಂಧ್ರ ಪ್ರದೇಶ. |
| 22 | 38 | ದೀಪಕ್ ಸೂರ್ಯಕಾಂತ ಟಿಕಾರೆ, C/o ಎಸ್.ಎಂ. ತಿಕಾರೆ, 1393/ಬಿ, ವಿಕ್ರಂಪುರ್, ಅಥಣಿ–591 304, ಬೆಳಗಾಂ ಜಿಲ್ಲೆ. |
| 23 | 42 | ದಿನಕರ ಎನ್. ಸೈಟ್ ನಂ.608, 3ನೇ ಬ್ಲಾಕ್, ಕಾಟಿಪಲ್ಲ ಅಂಚೆ, ಮಂಗಳೂರು, ದಕ್ಷಿಣ ಕನ್ನಡ. |
| 24 | 45 | ಗಂದನ್ ಎ, C/o ಟಿ. ಪದ್ಮವತಿ ಟೀಚರ್ ಮೇಹರ್ ಕಾಲೋನಿ, ವೆಲಮ ರಸ್ತೆ, ಬೊಬ್ಬಿಲಿ–535 558. ಆಂದ್ರಪ್ರದೇಶ. |
| 25 | 48 | ಗಿರೀಶ ಎಸ್, ನಂ. ಸಿ–2, ಕೋ–ಜೆನ್ ನ್ಯೂ ಕ್ವಾರ್ಟರ್ಸ್, ದಾವಣಗೆರೆ ಶುಗರ್ ಕಂಪನಿ ಲಿಮಿಟೆಡ್, ಕುಕುವಾಡ ವಿಲೇಜ್, ದಾವಣಗೆರೆ ತಾಲ್ಲೂಕು. |
| 26 | 52 | ಗುರುನಾಥನ್ ಎಂ, 8–6–78, ಹಳೆಯ ಅಂಚೆ ಕಛೇರಿ ಹತ್ತಿರ, 2ನೇ ಮಹಡಿ, ಸರಂಗೇಶ್ವರ ರಾವ್ ಬಿಲ್ಡಿಂಗ್, ಸೆತ್ತೆನಪಲ್ಲಿ–522 403, ಗುಂಟೂರು ಜಿಲ್ಲೆ, ಆಂಧ್ರಪ್ರದೇಶ. |
| 27 | 61 | ಜಯಶೀಲ ಶೆಟ್ಟಿ ಎಂ, ಗೌರಿ ವಿಹಾರ, ಅಜ್ಜಿಬೆಟ್ಟು, ಜೋಡುಮಾರ್ಗ ಅಂಚೆ, ಬಿ.ಸಿ. ರಸ್ತೆ, ಬಂಟ್ವಾಳ, ದಕ್ಷಿಣ ಕನ್ನಡ–574 219. |
| 28 | 62 | ಜ್ಯೋತಿ ಕುಮಾರ್ ಬಿ.ಡಿ, C/o ಚಿರಂಜೀವಿ ದಾಸ್ ನಗರ, ಹೆಚ್ 16–1, ಕೊಂಕ ರಸ್ತೆ, ರಾಯ್‌ಫರ್ ಜಿಲ್ಲೆ, ಛತ್ತೀಸ್‌ಫರ್. |
| 29 | 63 | ಕಡಲಿ ವೆಂಕಟೇಶ್ವರ ರಾವ್, ವೀರಯ್ಯ ಪವರ್ ಪ್ರಾಜೆಕ್ಟ್ಸ್ ಲಿಮಿಟೆಡ್, ಕುರುಮಾದಳ್ಳಿ, ಪಮರು ಮಂಡಲ್, ಕೃಷ್ಣ ಜಿಲ್ಲೆ–08674–254445, ಆಂಧ್ರಪ್ರದೇಶ. |
| 30 | 65 | ಕಮಲ ಕಣ್ಣನ್ ಆರ್, ಎ–303, ಕ್ರೇಸ್ಟ್ ಅಪಾರ್ಟ್‌ಮೆಂಟ್, ಅನ್ನೆಗುಂದಿ ರಸ್ತೆ, ಬಿಜೈ, ಮಂಗಳೂರು–575 004. |
| 31 | 66 | ಕನಪರ್ತಿ ಪಾಪ ರಾವ್, ಅಸಿಸ್ಟೆಂಟ್ ಇಂಜಿನಿಯರ್ (ಮೆಕ್ಯಾನಿಕಲ್), ಮೆ. ಹೆಚ್‌ಸಿಎಲ್ ಆಗ್ರೋ ಪವರ್ ಲಿಮಿಟೆಡ್, ವೇದಾದ್ರಿ (ವಿ), ಜಗ್ಗಯ್ಯಪೇಟ್ (ಮಂಡಲ್), ಕೃಷ್ಣ ಜಿಲ್ಲೆ, ಆಂಧ್ರಪ್ರದೇಶ. |
| 32 | 70 | ಕಣ್ಣನ್ ಜೆ, ನಂ.205–ಎ, 4ನೇ ಮುಖ್ಯರಸ್ತೆ (ಹೊಸ), 6ನೇ ಅಡ್ಡರಸ್ತೆ, ಪ್ರಕಾಶ ನಗರ, ಬೆಂಗಳೂರು–560 021 |

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>**ಶ್ರೀ/ಶ್ರೀಮತಿ:** |
|---|---|---|
| 33 | 71 | ಕನ್ನಿ ಎನ್.ವಿ.ಎಸ್ ಸೂರ್ಯ ರಮೇಶ, ಬಾಯ್ಲರ್ ಇಂಜಿನಿಯರ್, ವೀರಯ್ಯ ನಾನ್–ಕನ್‌ವೆನ್ಷನಲ್ ಪವರ್ ಪ್ರಾಜೆಕ್ಟ್ಸ್ ಲಿಮಿಟೆಡ್, ಕುರುಮದಾಲಿ, ಪಮರು ಮಂಡಲ್, ಕೃಷ್ಣ ಜಿಲ್ಲೆ, ಆಂದ್ರಪ್ರದೇಶ. |
| 34 | 72 | ಕನೂರು ಲಕ್ಷ್ಮಣ ರಾವ್, ಗಣಪತಿ ಶುಗರ್ಸ್ ಇಂಡಸ್ಟ್ರೀಸ್ ಲಿಮಿಟೆಡ್, ಫರಲ್‌ವಾಡಿ, ಸಂಗಾರೆಡ್ಡಿ, ಮೇದಕ್ ಜಿಲ್ಲೆ–502 294, ಆಂಧ್ರಪ್ರದೇಶ. |
| 35 | 73 | ಕಾರ್ತಿಕೇಯನ್ ಎಂ, ಚಿನ್ನ ಪೊನ್ನನ್ ಪೂಂಡಿ ಪೆರಿಯಮರ್ (ಬಿ.ಓ.), ಜಿಂಗಿ ತಾಲ್ಲೂಕು, ವಿಶಾಖಪಟ್ಟಣಂ–604 151, ಆಂಧ್ರಪ್ರದೇಶ. |
| 36 | 75 | ಕೇಶವ ರಘುನೇತು ರಾಮ್‌ದಾದ್, C/o ಆರ್.ಎಲ್. ರಾಮ್‌ದಾದ್, ಜೆ–15, ಬಂಗಾರುನಗರ, ವೆಸ್ಟ್ ಕೋಸ್ಟ್ ಪೇಪರ್ ಮಿಲ್ಸ್, ದಾಂಡೇಲಿ–581 325 (ಉತ್ತರ ಕನ್ನಡ) |
| 37 | 76 | ಕೋಕ ಕಮಲ ಪ್ರಸಾದ, S/o ಕೆ. ಮುರಾಹರಿ ರಾವ್, ಮನೆ ನಂ.22/153–2, ಇಂಗ್ಲೀಷ್ ಪಲೆಂ, ಮಚಲಿಪಟ್ಟಣಂ–521 001, ಕೃಷ್ಣ ಜಿಲ್ಲೆ, ಆಂಧ್ರಪ್ರದೇಶ. |
| 38 | 77 | ಕೋನ ಎಸ್. ಉದಯ ಭಾಸ್ಕರ್, C/o ಮುದಕಯ್ಯ ಸ್ವಾಮಿ, ಜಿ, ಶ್ರೀ ಹರವ ಭುವನೇಶ್ವರ ಟ್ರೇಡಿಂಗ್ ಕಂಪನಿ, ಜೆ.ಪಿ. ನಗರ, ಕರ್ಟಗಿ–583 229, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ. |
| 39 | 79 | ಕೃಷ್ಣಯ್ಯ ಬಿ, ನಂ.4, ಶ್ರೀ ವಾಣಿ ಶುಗರ್ಸ್ ಕ್ವಾರ್ಟರ್ಸ್, ಮುದಿಪಾಪನಪಲ್ಲಿ, ಸುಗಲಿಮಿತ, ಪುಂಗನೂರು–517 247, ಚಿತ್ತೂರು ಜಿಲ್ಲೆ, ಆಂದ್ರಪ್ರದೇಶ. |
| 40 | 80 | ಕುಮಾರ ಪ್ರಸನ್ನ ಹೆಚ್. ಕುಲಕರ್ಣಿ, S/o ಹೆಚ್.ವಿ. ಕುಲಕರ್ಣಿ, ಮನೆ ನಂ.87/ಬಿ, ಟೌನ್‌ಷಿಪ್, ಅಂಚೆ: ದಾಂಡೇಲಿ–581 325, ಉತ್ತರ ಕನ್ನಡ ಜಿಲ್ಲೆ, ಕರ್ನಾಟಕ ರಾಜ್ಯ. |
| 41 | 81 | ಕುಮಾರ್ ಜಿ, ಸೀನಿಯರ್ ಇಂಜಿನಿಯರ್, ಆರ್.ಕೆ. ಪವರ್‌ಜೆನ್ ಪ್ರೈವೇಟ್ ಲಿಮಿಟೆಡ್, ಚಳ್ಳಕೆರೆ ರಸ್ತೆ, ಹಿರಿಯೂರು–572 144, ಚಿತ್ರದುರ್ಗ ಜಿಲ್ಲೆ. |
| 42 | 82 | ಕುಮಾರ್ ಕೆ, C/o ಎಂ. ಮುರುಗೇಶನ್, ನಂ.39, 5ನೇ ಮುಖ್ಯರಸ್ತೆ, ಜಯಮಹಲ್ ಎಕ್ಸ್‌ಟೆನ್ಷನ್, ಬೆಂಗಳೂರು–560 046. |
| 43 | 83 | ಲಚ್ಚಪ್ಪ ಜಿ, C/o ಎಸ್. ನಾಗರಾಜ, ಮನೆ ನಂ.7ಎ/19, ಕನಕ ರಸ್ತೆ, ರೇಡಿಯೋ ಪಾರ್ಕ್, ಬಳ್ಳಾರಿ–583 102. |
| 44 | 86 | ಮಾದೇಗೌಡ ಹೆಚ್ S/o ಹೊಂಬೇಗೌಡ, ಮಾರಗೌಡನಹಳ್ಳಿ, ವಿಲೇಜ್, ಹನುಮಾನ್ ಅಂಚೆ, ಟಿ.ಎನ್. ಪುರ ತಾಲ್ಲೂಕು, ಮೈಸೂರು ಜಿಲ್ಲೆ. |
| 45 | 87 | ಮಧುಸೂದನ ಕೆ.ಬಿ, ಎಸ್‌ಸಿಎಂ ಶುಗರ್ಸ್ ಲಿಮಿಟೆಡ್, ಕೊಪ್ಪ ಮದ್ದೂರು ತಾಲ್ಲೂಕು, ಮಂಡ್ಯ ಜಿಲ್ಲೆ, ಕರ್ನಾಟಕ. |
| 46 | 88 | ಮಹೇಸ ಕೆ.ಎನ್, ಮನೆ ನಂ.173, ಎಂಆರ್‌ಪಿಎಲ್ ಟೌನ್‌ಶಿಪ್, Via–ಕಾಟಿಪಲ್ಲ, ಮಂಗಳೂರು, ಕುತ್ತೆತೂರು ಅಂಚೆ. |
| 47 | 89 | ಮಹೇಶ ಎಂ.ಪಿ, ಎಫ್‌ಎನ್–36, ಎಂಆರ್‌ಪಿಎಲ್ ಟೌನ್‌ಶಿಪ್, Via-ಕಾಟಿಪಲ್ಲ, ಮಂಗಳೂರು, ಕುತ್ತೆತೂರು ಅಂಚೆ. |
| 48 | 90 | ಮಂಗಿರೆಡ್ಡಿ ಗವಿ ಕಿಶೋರ, ಇಂಜಿನಿಯರ್, ವೀರಯ್ಯ ನಾನ್–ಕನ್‌ವೆನ್ಷನಲ್ ಪವರ್ ಪ್ರಾಜೆಕ್ಟ್ಸ್ ಲಿಮಿಟೆಡ್, ಪಮರು ಮಂಡಲ್, ಕೃಷ್ಣ ಜಿಲ್ಲೆ, ಆಂಧ್ರಪ್ರದೇಶ. |
| 49 | 91 | ಮಂಜುನಾಥ ಹೆಚ್.ಎನ್.ಬಿ., C/o ಎಂ. ಶಿವಕುಮಾರ್ (ಮ್ಯಾನೇಜರ್) (ಸಿವಿಲ್), ಕೋ–ಜೆನ್ ಡಿಪಾರ್ಟ್‌ಮೆಂಟ್, ದಿ ಗೋದಾವರಿ ಶುಗರ್ ಮಿಲ್ಸ್ ಲಿಮಿಟೆಡ್, ಸಮೀರವಾಡಿ, ಬಾಗಲಕೋಟೆ ಜಿಲ್ಲೆ. |
| 50 | 92 | ಮಂಜುನಾಥ, ಟಿ–ವಿ–154, ಆರ್‌ಟಿಪಿಎಸ್ ಕಾಲೋನಿ, ಶಕ್ತಿನಗರ–584 170, ರಾಯಚೂರು ಜಿಲ್ಲೆ. |
| 51 | 94 | ಮನೋಹರ ವಿ, C/o ರವಿಕುಮಾರ್, C/o ಸಂಪೂರ್ಣಮ್ಮ, 16ನೇ ವಾರ್ಡ್, ಎಸ್.ಎಸ್. ನಗರ್, ಸಿರುಗುಪ್ಪ–583 121, ಬಳ್ಳಾರಿ. |
| 52 | 95 | ಮರೀಡು ಆಂಜನೇಯಲು, S/o ಎಂ. ರಾಜ ರಾವ್, ಕಾಕವಾಡ ವಿಲ್ಲೇಜ್, ಮುದಿನೆಪಲ್ಲಿ, ಕೃಷ್ಣ ಜಿಲ್ಲೆ – 521 329 ಆಂಧ್ರಪ್ರದೇಶ. |
| 53 | 100 | ಮುತ್ತಪ್ಪ ತಿಪ್ಪಣ್ಣ ಜೈನಾಪುರ, ಟಿಆರ್‌ಟಿ 60/3, ಎಸಿಸಿ ಕಾಲೋನಿ, ವಾಡಿ, ಗುಲ್ಬರ್ಗಾ ಜಿಲ್ಲೆ – 585 225. |
| 54 | 101 | ನಾಗಭೂಷಣಂ ವಿ, C/o ಎ. ಸೀತರಾಮಣ್ಣ, ವಿಜಯ ಮೇರಿ ಸ್ಕೂಲ್ ಎದುರು, ವಿಜಯ ವಿಠ್ಠಲ ನಗರ, ಸಿರುಗುಪ್ಪ (ತಾಲ್ಲೂಕು ಮತ್ತು ಅಂಚೆ)–583 121, ಬಳ್ಳಾರಿ ಜಿಲ್ಲೆ. |
| 55 | 102 | ನಾಗೇಶ್ವರ ರಾವ್ ಜಿ.ವಿ.ವಿ.ಎಸ್.ಎಸ್.ಎಸ್, ಗಣಪತಿ ಶುಗರ್ಸ್ ಇಂಡಸ್ಟ್ರೀಸ್ ಲಿಮಿಟೆಡ್, ಫಸಲ್‌ವಾಡಿ, ಸಂಗರೆಡ್ಡಿ, ಮೇದಕ್ ಜಿಲ್ಲೆ–502 294, ಆಂಧ್ರಪ್ರದೇಶ. |
| 56 | 103 | ನರಸಿಂಹ ಪಿ. ಕುಲಕರ್ಣಿ, ದಿವಾಕರ ಗಲ್ಲಿ, ಮಹದೇವ ದೇವಸ್ಥಾನದ ಹತ್ತಿರ, ಅಂಚೆ: ಉಗಾರ್ ಖುರ್ದ್, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ. |

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ<br>ಶ್ರೀ/ಶ್ರೀಮತಿ: |
|---|---|---|
| 57 | 106 | ನಜೀರ್ ಬಿ, C/o ರಾಮಕೃಷ್ಣ ಹಜಾರೆ (ಬೆಳಗಾಂ ಅಂಚೆ), ಬಾಗಲಕೋಟೆ ಪ್ಲಾಟ್, ಪೊಲೀಸ್ ಸ್ಟೇಷನ್ ಎದುರು, ಮಹಾಲಿಂಗಪುರ ಅಂಚೆ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 58 | 109 | ಪರಮಶಿವಂ ಎನ್, ಎಫ್‌ಎನ್–33, ಎಂಆರ್‌ಪಿಎಲ್ ಟೌನ್‌ಷಿಪ್, ಕುತ್ತೆತ್ತೂರು ಅಂಚೆ, Via-ಕಾಟಿಪಲ್ಲ, ಮಂಗಳೂರು–575 030. |
| 59 | 111 | ಪೆದಾದ ಶ್ಯಾಮಲ ರಾವ್, C/o ಎಸ್.ಎಸ್.ಎನ್. ಮೂರ್ತಿ, ಇಂಎಎಸ್, Office of the Garrisson Engineer, ರಾಮಘರ್, ಕಂಟೋನ್‌ಮೆಂಟ್, ಹಜರಿಬಾಗ್ ಜಿಲ್ಲೆ, ಜಾರ್‌ಖಂಡ್. |
| 60 | 115 | ಪ್ರಕಾಶ ಮಹೇಂದ್ರಕರ್, ಅಂಚೆ: ಯದಹಳ್ಳಿ (ಗಲಗಲಿ ಹತ್ತಿರ), ಬೀಳಗಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ–587 117. |
| 61 | 116 | ಪ್ರಕಾಶ ಎಸ್ ಗಸ್ತಿ C/o ಸಿದ್ರೆ ಎಸ್. ಗಸ್ತಿ, ಅಂಚೆ: ಅಥಣಿ, ಶಾಂತಿನಗರ, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ. |
| 62 | 117 | ಪ್ರಕಾಶ ಗಾಂವ್‌ಕರ್, C/o ಕೆ.ಎಸ್.ಗಾಂವ್‌ಕರ್, ಬ್ಲಾಕ್–2/ಬಿ, ಟೌನ್‌ಷಿಪ್, ದಾಂಡೇಲಿ–581 325, ಉತ್ತರ ಕನ್ನಡ. |
| 63 | 118 | ಪ್ರವೀಣ್ ಕುಮಾರ್ ಪಿ, ಮನೆ ನಂ.86/7ನೇ ವಾರ್ಡ್, ವಸುಂದರ ನಾಯ್ಡು ರಸ್ತೆ, ಬಳ್ಳಾರಿ–583 101. |
| 64 | 120 | ಪುಸಲೂರಿ ಶೇಷಗಿರಿ ರಾವ್, ಮಧುಕಾನ್ ಶುಗರ್ಸ್ ಲಿಮಿಟೆಡ್, ರಾಜೇಶ್ವರಪುರಂ ಅಂಚೆ, ನೆಲಕೊಂಡಪೊಲ್ಲಿ (ಮಂಡಲ್), ಕಮ್ಮಮ್ ಜಿಲ್ಲೆ–507 160, ಆಂಧ್ರಪ್ರದೇಶ. |
| 65 | 122 | ರಾಘವೇಂದ್ರ ಹೆಚ್.ಎಸ್., ಎಫ್‌ಎನ್–20, ಎಂಆರ್‌ಪಿಎಲ್ ಟೌನ್‌ಷಿಪ್, ಕುತ್ತೆತ್ತೂರು ಅಂಚೆ, Via-ಕಾಟಿಪಲ್ಲ, ಮಂಗಳೂರು–575 030. |
| 66 | 123 | ರಾಜ ಶೇಖರ ರಾವ್ ವೈ, C/o ಎಂ. ಅನ್ನಿಗರ್, ಮನೆ ನಂ.2162/91, ದೊಡ್ಡಮನೆ, ಚಾಮಲಪುರ ರಸ್ತೆ, ನಂಜನಗೂಡು ಅಂಚೆ, ಮೈಸೂರು ಜಿಲ್ಲೆ. |
| 67 | 124 | ರಾಜಪುರ, ಎಸ್.ಓ, C/o ವಿ.ಓ. ಕಾಮತ್, 227, ಕೆಹೆಚ್‌ಬಿ ಕಾಲೋನಿ, ಸೋಲಾಪುರ ರಸ್ತೆ, ಬಿಜಾಪುರ. |
| 68 | 126 | ರಾಜಶೇಖರ ಬಿ. ಜಯಶೆಟ್ಟಿ, ಅಂಚೆ: ಬೈರವಾಡಗಿ, ಬಾಗೇವಾಡಿ ತಾಲ್ಲೂಕು, ಬಿಜಾಪುರ ಜಿಲ್ಲೆ–586 203. |
| 69 | 127 | ರಾಜೇಂದ್ರ ಪಾಟೀಲ್, C/o ಎಸ್.ಬಿ. ದೂಗನ್ನವರ್, "ಬಸವಕೃಪ", ಚೆನ್ನಮ್ಮ ನಗರ, ಬಿಜಾಪುರ ರಸ್ತೆ, ಜಮಖಂಡಿ, ಬಾಗಲಕೋಟೆ ಜಿಲ್ಲೆ. |
| 70 | 134 | ರಮೇಶ್ ಹೆಚ್.ಕೆ, ಟಿ–5/348, ಕಾವೇರಿ ಬ್ಲಾಕ್, ಶಕ್ತಿನಗರ, ರಾಯಚೂರು–584 170. |
| 71 | 135 | ಉಂಗನಾಥ್ ಎನ್, S/o ವಿ. ನಾರಾಯಣಪ್ಪ, ಬಂಚಲಿ ಹುಂಡಿ (ಪ್ರೈಮರಿ ಶಾಲೆ ಹತ್ತಿರ), ತಾಂಡವಪುರ ಅಂಚೆ, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ. |
| 72 | 139 | ರವೀಂದ್ರ ಕೆ.ಬಿ, ಟಿ–5/154, ಕೆಪಿಸಿಎಲ್, ಶಕ್ತಿನಗರ, ರಾಯಚೂರು–584 170 |
| 73 | 142 | ರವಿ ಕುಮಾರ್ ಕೆ.ಎಸ್, Desein Pvt Ltd, ಜಿಎಸ್‌ಎಂಎಲ್, ಸಮೀರವಾಡಿ, ಮುಧೋಳ್ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 74 | 144 | ರವಿ ಬಿ, ಕೊಂಡಂಪಲ್ಲಿಕರ್, ಟೈಪ್ 2ಎ/2, ಟಾಟಾ ಕ್ವಾರ್ಟರ್ಸ್, ಎಸಿಸಿ ಕಾಲೋನಿ, ವಾಡಿ (Jn) ಗುಲ್ಬರ್ಗಾ ಜಿಲ್ಲೆ–585 225. |
| 75 | 145 | ರವಿಚಂದ್ರ ಜಿ, ನಂ.ಬಿ–13, ರೈಟರ್ ಬಸ್ತಿ, ಕೋಥಗುಡೆಂ, ಆಂಧ್ರಪ್ರದೇಶ–507 101. |
| 76 | 149 | ರವೀಂದ್ರನಾಥ ಥಾಕೂರ್, ಮನೆ ನಂ.2–3–10, ಬಸ್ ಕಾಂಪ್ಲೆಕ್ಸ್ ಹತ್ತಿರ, ಪೀತಪುರಂ–533450, ಈಸ್ಟ್ ಗೋದಾವರಿ ಜಿಲ್ಲೆ, ಆಂಧ್ರಪ್ರದೇಶ. |
| 77 | 154 | ಸಂಜಯ್ ಸದಾಶಿವ ತೊರುಷೆ, ಮಾರುತಿ ದೇವಸ್ಥಾನದ ಹಿಂಭಾಗ, ಅಂಚೆ: ಉಗಾರ್‌ಖುರ್ದ್–591 315, ಅಥಣಿ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 78 | 157 | ಸಂತೋಷ, ಟಿ–5–236, ಆರ್‌ಟಿಪಿಎಸ್ ಕಾಲೋನಿ, ಶಕ್ತಿನಗರ–584 170, ರಾಯಚೂರು ಜಿಲ್ಲೆ. |
| 79 | 161 | ಸತೀಶ ಚಂದ್ರ ಎಂ.ಪಿ, S/o ಪುಟ್ಟಸ್ವಾಮಿ, ಎಂ.ಕೆ, "ಸತೀಶ ನಿಲಯ", 11ನೇ ಅಡ್ಡರಸ್ತೆ, ಚಾಮುಂಡೇಶ್ವರಿನಗರ, ಕೆಇಬಿ ಕಾಲೋನಿ, ಮಂಡ್ಯ–571 401. |
| 80 | 162 | ಸತೀಶ ಕುಮಾರ್ ಎಸ್, ಆರ್.ಕೆ. ಪವರ್‌ಜೆನ್ ಪ್ರೈ. ಲಿ., 5ನೇ ಕಿ.ಮೀ., ಚಳ್ಳಕೆರೆ ರಸ್ತೆ, ಹಿರಿಯೂರ್–572 144, ಚಿತ್ರದುರ್ಗ ಜಿಲ್ಲೆ. |
| 81 | 164 | ಸತ್ಯನಾರಾಯಣ ಜಿ.ವಿ.ವಿ, S/o ಸೀತಾ ರಾಮು ದಾಸ್, ಸೋಮೇಶ್ವರಂ–533 261, ರಾಯವರಂ ಮಂಡಲ್, ಆಂಧ್ರಪ್ರದೇಶ. |
| 82 | 170 | ಶಶಿಕುಮಾರ್ ಜಿ.ಎನ್, ಮೆ. ಸೌತ್ ಇಂಡಿಯಾ ಪೇಪರ್ ಮಿಲ್ಸ್ ಲಿಮಿಟೆಡ್, ಚಿಕ್ಕಯ್ಯನಛತ್ರ ಅಂಚೆ, ನಂಜನಗೂಡು–571 301, ಮೈಸೂರು ಜಿಲ್ಲೆ. |
| 83 | 172 | ಶಿವಕುಮಾರ್ ಪಾಟೀಲ್, ಟಿ–5–267, ಶಕ್ತಿನಗರ–584 170, ರಾಯಚೂರು ಜಿಲ್ಲೆ. |

| ಕ್ರಮ ಸಂಖ್ಯೆ | ನೋಂದಣಿ ಸಂಖ್ಯೆ | ಅಭ್ಯರ್ಥಿಗಳ ಹೆಸರು ಮತ್ತು ವಿಳಾಸ **ಶ್ರೀ/ಶ್ರೀಮತಿ:** |
|---|---|---|
| 84 | 174 | ಶಿವಲಿಂಗೇಶ್ವರ ಅನ್ನಪ್ಪ ಕೋಟಬಾಗಿ, ಕಾನಪುರ ಅಂಚೆ, ನಂದಗಾಂತ್, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ. |
| 85 | 178 | ಸಿತಾನ್ಶು ಪ್ರಸಾದ್ ಆಚಾರ್ಯ, ಸೀನಿಯರ್ ಇಂಜಿನಿಯರ್ (ಮೆಕ್ಯಾನಿಕಲ್), ಜಮಖಂಡಿ ಶುಗರ್ಸ್ ಲಿಮಿಟೆಡ್, ಅಂಚೆ: ಹಿರೇಪಾಡ್ ಸಲಗಿ ತಾಲ್ಲೂಕು, ಜಮಖಂಡ್, ಬಾಗಲಕೋಟೆ ಜಿಲ್ಲೆ. |
| 86 | 179 | ಶಿವ ಪ್ರಸಾದ್ ಈ, ಶಡಂಗಿ ಹೌಸ್, ಬಂಗ್ಲಾ ಪಾರಾ ನಾರ್ತ್ ಚಕ್ರಚಾರ್ ನಗರ, ರಾಯಘರ್, ಛತ್ತೀಸ್‌ಘರ್–496 001. |
| 87 | 184 | ಶ್ರೀಧರ ಉಲ್ಲಾಸ ನಾಯ್ಕ, S/o ಉಲ್ಲಾಸ ನಾಯ್ಕ, ನ್ಯೂ ಡಿ.ಆರ್.ಟಿ. ಕ್ವಾರ್ಟರ್ಸ್, 31/264, ಬಂಗಾರುನಗರ, ದಾಂಡೇಲಿ, ಕರ್ನಾಟಕ. |
| 88 | 194 | ಸುಧಾಕರ ಮುಗ್ಗಮ್, ಈಡಬ್ಲುಎಸ್–146, ಬಸವೇಶ್ವರನಗರ, ದಾಂಡೇಲಿ–581 325, ಉತ್ತರ ಕನ್ನಡ ಜಿಲ್ಲೆ. |
| 89 | 196 | ಸುಧೀನ ನಾಗೇಶ್ವರ ರಾವ್, S/o ಎಸ್. ರಾಮ ರಾವ್, ತಿಮ್ಮರಾಜು ಪಾಲಂ, ನಿದದವೋಲೆ–534301, ವೆಸ್ಟ್ ಗೋದಾವರಿ ಜಿಲ್ಲೆ, ಆಂಧ್ರ ಪ್ರದೇಶ. |
| 90 | 197 | ಸುಂದರ ವೀರರಾಜು, C/o ರಾಘವ ವೆಂಕಟೇಶ್ವರ ರಾವ್, Bross Bindela Business, ಕೊತ್ತೂರು, ಕಾಮವರಪು ಕೋಟ (ವಿ ಅಂಡ್ ಎಂ), ಚಿಂತಲಪುಡಿ ತಾಲ್ಲೂಕು, ವೆಸ್ಟ್ ಗೋದಾವರಿ ಜಿಲ್ಲೆ, ಆಂಧ್ರ ಪ್ರದೇಶ. |
| 91 | 198 | ಸುನೀಲ್ ಖಾರೆ, ಮನೆ ನಂ.ಎ/1 25, ಬಂಗ್ಲೋ ಕಾಲೋನಿ, ವಯಪಾರ್ ವಿಹಾರ ರಸ್ತೆ, ಬಿಲಾಸಪುರ–495 001, ಛತ್ತೀಸ್‌ಘರ್. |
| 92 | 200 | ಐ. ಸುರೇಶ, S/o ಸತ್ಯನಾರಾಯಣ, ಮಾರ್ಕೊನಪಾಡು (ಸೂರ್ಯರಾವ್ ಪೇಟ್), ಚಗಲ್ಲು ಮಂಡಲ್, ವೆಸ್ಟ್ ಗೋದಾವರಿ ಜಿಲ್ಲೆ, ಆಂಧ್ರ ಪ್ರದೇಶ. |
| 93 | 201 | ತಲವಾರ್ ವಿ.ಎಂ, S/o ಎಂ.ವಿ. ತಲವಾರ್, ಬೇಡರ್ಗಲ್ಲಿ, ಗುರುವಾರಪೇಟ್, ಗೋಕಾಕ್, ಬೆಳಗಾಂ ಜಿಲ್ಲೆ. |
| 94 | 202 | ತಿಮ್ಮಣ್ಣ ಜೆ. ಮೇಟಿ, ಜಂಬಗಿ ಕೆ.ಡಿ, ಅಂಚೆ: ಕಸಬ ಜಂಬಗಿ, ಮುಧೋಳ ತಾಲ್ಲೂಕು, ಬಾಗಲಕೋಟೆ ಜಿಲ್ಲೆ. |
| 95 | 205 | ತುತ್ತಗುಂಟ ವೆಂಕಟೇಶ್ವರ ಶಾಸ್ತ್ರಿ, S/o ಎಂ.ವಿ. ರಾಮಮೂರ್ತಿ, ರಂಗಾಪುರ, Biccavolu, ಈಸ್ಟ್ ಗೋದಾವರಿ ಜಿಲ್ಲೆ, ಆಂಧ್ರ ಪ್ರದೇಶ. |
| 96 | 207 | ಉಪೇಂದ್ರ ಆರ್.ಎಸ್, ಟೈಪ್ 5–93, ಆರ್‌ಟಿಪಿಎಸ್ ಕಾಲೋನಿ, ಶಕ್ತಿನಗರ–584 170, ರಾಯಚೂರು ಜಿಲ್ಲೆ. |
| 97 | 208 | ವಜ್ಜ ವೆಂಕಟ ರಾಮ ರಾವ್, ಮಂದ್ರಾಜುಪಲ್ಲಿ (ಅಂಚೆ), ನೀಲಕೊಂಡ ಪಲ್ಲಿ (ಎಂ), ಕಮ್ಮಮ್ ಜಿಲ್ಲೆ–507 160, ಆಂಧ್ರಪ್ರದೇಶ. |
| 98 | 209 | ವಸಂತ ಪಿ. ನಾಡಿಗರ್, ಎವಿ–21/7, ರಾಜಶ್ರೀ ಸಿಮೆಂಟ್, ಆದಿತ್ಯನಗರ,ಮಲ್ಕೆಡ್–585 292, ಸೇಡಂ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 99 | 210 | ವಸಂತ ಕುಮಾರ್ ಬಿ.ಎಸ್, ನಂ.ಎವಿ–11/11, ಆದಿತ್ಯ ನಗರ, ಸೇಡಂ ತಾಲ್ಲೂಕು, ಗುಲ್ಬರ್ಗಾ ಜಿಲ್ಲೆ. |
| 100 | 211 | ವೀರಬೊಯನ ರಾಮಮಲ್ಲು, ಮಧುಕಾನ್ ಶುಗರ್ಸ್ ಲಿಮಿಟೆಡ್, ರಾಜೇಶ್ವರಪುರಂ ಅಂಚೆ, ನೆಲಕೊಂಡಪೊಲ್ಲಿ (ಮಂಡಲ್), ಕಮ್ಮಮ್ ಜಿಲ್ಲೆ–507 160, ಆಂಧ್ರಪ್ರದೇಶ. |
| 101 | 212 | ವೀರಮಚಸೇನಿ ರಾಮು, ಗಣಪತಿ ಶುಗರ್ಸ್ ಲಿಮಿಟೆಡ್, ಫಸಲ್‌ವಾಡಿ, ಸಂಗರೆಡ್ಡಿ, ಮೇದಕ್ ಜಿಲ್ಲೆ–502 294 ಆಂಧ್ರಪ್ರದೇಶ. |
| 102 | 213 | ವೆಂಕಪ್ಪ ಕೆ. ಮಿರ್ಜಿ, C/o ಎಸ್.ಬಿ. ದೂಗನ್ನವರ್, ಬಸವಕೃಪ, ಚನ್ನಮ್ಮ ನಗರ, ಬಿಜಾಪುರ ರಸ್ತೆ, ಜಮಖಂಡಿ ತಾಲ್ಲೂಕು, ಬಾಗಲಕೋಟೆ–587 301. |
| 103 | 214 | ವೆಂಕಟ ನಾಗ ರಮೇಶ ವಿ, S/o ವಿ. ಭೋಸ್, ಮನೆ ನಂ.11/315, C/o ವಿಜಯ ಡೈರಿ ಪಾರ್ಲರ್, ಸಿರಿ ಎಸ್ಟೇಟ್, ಚೆಮ್ಮನಾಗಿರಿಪೇಟ, ಮಚಲಿಪಟ್ಟಣಂ ಅಂಚೆ, ಕೃಷ್ಣ ಜಿಲ್ಲೆ, ಆಂಧ್ರಪ್ರದೇಶ. |
| 104 | 216 | ವಿದ್ಯಾಸಾಗರ್ ಜಿ.ಎಸ್.ಸಿ, ನಂ.ಸಿ–8, ಎಂಐಜಿ ಪ್ರಗತಿ ನಗರ, ಎಸ್‌ಐಐಎಲ್ ಕ್ಯಾಂಪಸ್, ಪಲೋಂಚ–507 154, ಆಂಧ್ರಪ್ರದೇಶ. |
| 105 | 217 | ವಿಮಲನ್ ಆರ್, C/o ಸಿದ್ದಲಿಂಗಪ್ಪ ಬಿ ಪಾಟೀಲ್, ನಂ.4349, ವಿದ್ಯಾನಗರ, ಮಹಾಲಿಂಗಪುರ, ಮುಧೋಲ್ ತಾಲ್ಲೂಕು, ಬಾಗಲಕೋಟೆ. |
| 106 | 218 | ವಿನಯ ದಾಬಡೆ, ಟಿಆರ್‌ಟಿ–44/8, ಎಸಿಸಿ ಕಾಲೋನಿ, ವಾಡಿ (ಜಂಕ್ಷನ್), ಗುಲ್ಬರ್ಗಾ–585 225 |
| 107 | 221 | ವಿಶ್ವನಾಥ ಎ ಕಲಾಶೆಟ್ಟಿ, ಚಂದಕ್ ಬಿಲ್ಡಿಂಗ್, ರಾಮೇಶ್ವರ ಕಾಲೋನಿ, ಜಮಖಂಡಿ. |
| 108 | 224 | ವಿವೇಕನಂದ ಬಿ. ಕಲ್ಲೋಲಿ, ಅಂಚೆ: Khanagaon, ಗೋಕಾಕ್ ತಾಲ್ಲೂಕು, ಬೆಳಗಾಂ ಜಿಲ್ಲೆ. |
| 109 | 225 | ವೆಂಕಟ ರಮೇಶ ಚಲ್ಲ, ನಂ.ಡಿ–6, ಮಧುಕಾನ್ ಶುಗರ್ಸ್ ಲಿಮಿಟೆಡ್, ರಾಜೇಶ್ವರಪುರಂ ಅಂಚೆ, ನೆಲಕೊಂಡಪಲ್ಲಿ (ಮಂಡಲ್), ಕಮ್ಮಮ್ ಜಿಲ್ಲೆ–507 160, ಆಂಧ್ರಪ್ರದೇಶ. |

ಕಾರ್ಯದರ್ಶಿ,

ಪಿ.ಆರ್. 1631 ಬಾಯ್ಲರುಗಳ ಆಪರೇಷನ್ ಇಂಜಿನಿಯರ್ಸ್ ಪರೀಕ್ಷಾ ಮಂಡಳಿ, ಬೆಂಗಳೂರು.

## ಭಾಷಾಂತರ ನಿರ್ದೇಶನಾಲಯ
## ಸಾರ್ವಜನಿಕ ಮಾಹಿತಿ ಹಕ್ಕು ಅಧಿನಿಯಮ
## ಕೈಪಿಡಿ–2005
## ಭಾಷಾಂತರ ನಿರ್ದೇಶನಾಲಯ 3ನೇ ಮಹಡಿ, ಎಫ್ ಬ್ಲಾಕ್, ಸಿಬಿಎಬಿ ಕಾಂಪ್ಲೆಕ್ಸ್, ಕಾವೇರಿ ಭವನ, ಬೆಂಗಳೂರು–560009

### ಅಧ್ಯಾಯ–1
### ಪ್ರಸ್ತಾವನೆ

ಮಾಹಿತಿ ಹಕ್ಕು ಅಧಿನಿಯಮದ ಅಡಿಯಲ್ಲಿ ಸಾರ್ವಜನಿಕ ಸಂಪರ್ಕ ಇರುವ ಪ್ರತಿಯೊಂದು ಇಲಾಖೆಯನ್ನು ಸಾರ್ವಜನಿಕ ಪ್ರಾಧಿಕಾರ ಎಂದು ಪರಿಗಣಿಸಲಾಗಿದೆ. ಮಾಹಿತಿ ಹಕ್ಕು ಅಧಿನಿಯಮದ ಖಂಡ 4 (1) (ಬಿ) ಅನ್ವಯ ಸದರಿ ಅಧಿನಿಯಮವು ಅಧಿನಿಯಮಿತಗೊಂಡ 120 ದಿನಗಳೊಳಗೆ ಪ್ರತಿಯೊಂದು ಸಾರ್ವಜನಿಕ ಪ್ರಾಧಿಕಾರವು 17 ಶೀರ್ಷಿಕೆಗಳಡಿಯಲ್ಲಿ ಇಲಾಖೆಯ ಸಂಘಟನೆ, ಅದರ ಕೆಲಸ ಕಾರ್ಯಗಳು, ಕರ್ತವ್ಯಗಳು, ಅದರ ಅಧಿಕಾರಿಗಳ ಕರ್ತವ್ಯಗಳು ಮತ್ತು ಜವಾಬ್ದಾರಿಗಳು, ಕಾರ್ಯವಿಧಾನ' ಕರ್ತವ್ಯಗಳ ನಿರ್ವಹಣೆಗೆ ಸಂಬಂಧಿಸಿದ ಸೂತ್ರಗಳು ಇವೇ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಸಂಕಲಿಸಿ ಪ್ರಕಟಿಸುವುದು ಕಡ್ಡಾಯವಾಗಿದೆ. ತದನುಸಾರವಾಗಿ ಭಾಷಾಂತರ ನಿರ್ದೇಶನಾಲಯಕ್ಕೆ ಸಂಬಂಧಿಸಿದಂತೆ ಮೇಲ್ಕಂಡ ಪೂರ್ಣ ಮಾಹಿತಿಯನ್ನು ಒಳಗೊಂಡ ಈ ಕೈಪಿಡಿಯನ್ನು ಸಾರ್ವಜನಿಕರ ಮಾಹಿತಿಗಾಗಿ ಸಂಕಲಿಸಿ ಪ್ರಕಟಿಸಲಾಗಿದೆ.

### ಅಧ್ಯಾಯ –2
### ಪೀಠಿಕೆ

ಜನರಾಡುವ ಭಾಷೆಯಲ್ಲಿಯೇ ಆಡಳಿತ ನಡೆಸಬೇಕೆನ್ನುವುದು ಸರ್ಕಾರದ ನೀತಿಯಾಗಿದೆ. ಜನರ ಭಾಷೆಯಲ್ಲೇ ಆಡಳಿತ ನಡೆದರೆ ಸರ್ಕಾರದ ನೀತಿಗಳು, ಯೋಜನೆಗಳು, ಕಾರ್ಯಕ್ರಮಗಳು, ಕಾರ್ಯಕಲಾಪಗಳು ಜನಸಾಮಾನ್ಯರಿಗೂ ತಿಳಿಯುತ್ತವೆ. ಆಗ ಜನರೂ ರಾಜ್ಯಾಡಳಿತದಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ಸಾಧ್ಯವಾಗುತ್ತದೆ.

ಕರ್ನಾಟಕ ಆಡಳಿತದಲ್ಲಿ ಹಾಗೆ ಜನರ ಭಾಷೆಯನ್ನು ಬಳಸುವಲ್ಲಿ ಎಂದಿಗೂ ಹಿಂದೆ ಬಿದ್ದಿಲ್ಲ. ಕ್ರಿ. ಪೂ. ನಾಲ್ಕನೆಯ ಶತಮಾನ ಅಂದರೆ ಮೌರ್ಯರ ಕಾಲದಿಂದಲೇ ಕರ್ನಾಟಕ ರಾಜಕೀಯ ಚರಿತ್ರೆ ಲಭ್ಯವಿದೆ. ಗಂಗ, ಕದಂಬ, ಪಲ್ಲವರು, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ವಿಜಯನಗರ ಅರಸರು, ಮೊಗಲರ ಆಳ್ವಿಕೆಯ ನಂತರ ಕನ್ನಡ ನಾಡು ತುಂಡರಸರು, ಪಾಳೆಯಗಾರರು, ಒಡೆಯರು, ಬಹುಮನಿ ಸುಲ್ತಾನರು, ಹೈದರಾಲಿ ಮೊದಲಾದ ಅರಸರ ನಡುವೆ ಹರಿದು ಹಂಚಿ ಹೋಗಿದ್ದು, ಇಷ್ಟೆಲ್ಲ ಆಳರಸರ ಕೈಯಲ್ಲಿ ಅನೇಕ ಸ್ಥಿತ್ಯಂತರ ಕಂಡರೂ ನಾಡು ಉದ್ದಕ್ಕೂ ಕನ್ನಡ ಭಾಷೆಯನ್ನೇ ಆಡಳಿತ ಭಾಷೆಯನ್ನಾಗಿ ಇಟ್ಟುಕೊಂಡು ಕನ್ನಡಕ್ಕೆ ಸೂಕ್ತ ಮನ್ನಣೆ ಕೊಟ್ಟುಕೊಂಡು ಬಂದುದಕ್ಕೆ ಸಾಕಷ್ಟು ದಾಖಲೆಗಳು ಸಿಗುತ್ತವೆ. ಆಯಾ ಅರಸರ ಕಾಲದಲ್ಲಿ ಬಳಕೆಯಲ್ಲಿದ್ದ ಕನ್ನಡ ಲಿಪಿ. ಆಡಳಿತ ಶಬ್ದಗಳು, ನಿರೂಪಗಳು, ರಾಜಾಜ್ಞೆಗಳೇ ಅಲ್ಲದೆ ತಾಮ್ರ ಶಾಸನಗಳಲ್ಲಿ, ತಾಳೆ ಓಲೆಗರಿಗಳಲ್ಲಿ ರಾಜ್ಯಾಡಳಿತ ವಿಷಯಗಳು ಕನ್ನಡದಲ್ಲಿ ವರ್ಣಿತವಾಗಿರುವುದನ್ನು ನೋಡಿದರೆ ಜನರಾಡುವ ಭಾಷೆಯಲ್ಲಿಯೇ ಅವರು ಆಡಳಿತವನ್ನು ನಡೆಸಿದ್ದರೆಂಬುದರಲ್ಲಿ ಸಂಶಯವಿಲ್ಲ.

ಮುಂದೆ, ಇಂಗ್ಲೀಷರು ಭಾರತದ ಒಂದೊಂದೇ ಭಾಗಗಳನ್ನು ವಶಪಡಿಸಿಕೊಳ್ಳುತ್ತ ಬಂದಂತೆಯೇ, ಆಡಳಿತದಲ್ಲಿ ಇಂಗ್ಲೀಷ್ ಬಳಸುವ ಕ್ರಮ ರಾಜಕೀಯ ಅಗತ್ಯವಾಗಿ ಕಂಡಿದ್ದರಿಂದಾಗಿ ಇಂಗ್ಲೀಷ್ ಭಾಷಾ ಬಳಕೆ, 1835 ರಿಂದಲೇ ಆಂಗ್ಲ ಸರಕಾರದ ನೀತಿಯಾಯಿತು. ಇಂಗ್ಲೀಷು ಆಡಳಿತ ಭಾಷೆಯಾಯಿತು. ಆದಾಗ್ಯೂ, ಈ ಶತಮಾನದ ಆದಿಯವರೆಗೂ ಕನ್ನಡವನ್ನು ಕೆಳಮಟ್ಟದ ಕಚೇರಿಗಳಲ್ಲಿ, ಕೋರ್ಟುಗಳಲ್ಲಿ ಉಳಿಸಿಕೊಳ್ಳುವ ಪ್ರಯತ್ನ ನಡೆದೇ ಇತ್ತು. ಸಿವಿಲ್ ಪ್ರಕ್ರಿಯಾ ಸಂಹಿತೆಯ 137 ನೆ ಪ್ರಕರಣ ಹಾಗೂ ದಂಡ ಪ್ರಕ್ರಿಯಾ ಸಂಹಿತೆಯ 257ನೆಯ ಪ್ರಕರಣಗಳ ಮೇರೆಗೆ ಅಧೀನ ನ್ಯಾಯಾಲಯಗಳಲ್ಲಿ ಪ್ರಾಂತೀಯ ಭಾಷೆಯನ್ನು ಬಳಸಬಹುದೆಂದು ಆಂಗ್ಲರೇ ಅವಕಾಶ ನೀಡಿದ್ದರೂ ನ್ಯಾಯಾಧೀಶರು ಹಾಗೂ ವಕೀಲರುಗಳು ಆ ಸೌಲಭ್ಯವನ್ನು ಬಳಸಿಕೊಳ್ಳಲಿಲ್ಲ. ಇಂಗ್ಲೀಷ್ ವಿದ್ಯಾಭ್ಯಾಸ ಮಾಡಿದ ಹಾಗೂ ಕನ್ನಡ ಸಾಕಷ್ಟು ಕಲಿಯದ ಜನರನ್ನು ತಾಲ್ಲೂಕು ಮಟ್ಟದವರೆಗೂ ನೇಮಕ ಮಾಡುವ ಪರಿಪಾಠ ಬೆಳೆದು, ಕನ್ನಡದಲ್ಲಿ ಶ್ರದ್ಧೆ ಇರದಂತಹ ಇಂಗ್ಲೀಷ್ ಪ್ರೇಮಿಗಳನ್ನು ಉನ್ನತ ಸ್ಥಾನಗಳಲ್ಲಿ ಕೂರಿಸುವ ಪದ್ಧತಿಯಿಂದಾಗಿ ಆಂಗ್ಲರ ಆಡಳಿತದಲ್ಲಿ ಕನ್ನಡ ಹಿನ್ನಡೆ ಸಾಧಿಸಿತು. ಈ ಹಿನ್ನೆಲೆಯಲ್ಲಿ, ಕಾಲಕ್ರಮೇಣ ಆಂಗ್ಲರ ಆಳ್ವಿಕೆಯಲ್ಲಿ ದ್ವಿಭಾಷಿಗಳನ್ನು ಹಾಗೂ ಭಾಷಾಂತರಕಾರರನ್ನು ನೇಮಿಸಿಕೊಂಡು ಆಡಳಿತ ಮತ್ತು ಕಾನೂನು ವಿಷಯಗಳನ್ನು ಇಂಗ್ಲೀಷಿನಿಂದ ಕನ್ನಡಕ್ಕೆ ಭಾಷಾಂತರ ಮಾಡುವ ಕಚೇರಿಗಳನ್ನು ಹುಟ್ಟು ಹಾಕುವುದು ಅನಿವಾರ್ಯವಾಯಿತು. ಅವುಗಳನ್ನು Oriental Translations Department ಎಂದು ಕರೆಯಲಾಗುತ್ತಿತ್ತು. ಎಲ್ಲ ಭಾಷಾಂತರ ಕಚೇರಿಗಳ ಸ್ಥಾಪನೆಯ ಉದ್ದೇಶ ಆಂಗ್ಲ ಸರಕಾರದ ಆಡಳಿತಕ್ಕೆ ಅನುಕೂಲ ಮಾಡಿಕೊಡುವುದೇ ಆಗಿತ್ತು.

ಆಂಗ್ಲರು ನಮ್ಮ ನಾಡನ್ನು ಸುಮಾರು ಇನ್ನೂರು ವರ್ಷಗಳ ಕಾಲ ಆಳಿದರು. ಮೊದಮೊದಲು ಇಂಗ್ಲೀಷು ಆಂಗ್ಲ ಅಧಿಕಾರಿಗಳ ಕಾರ್ಯಾಲಯಕ್ಕಷ್ಟೇ ಸೀಮಿತವಾಗಿದ್ದು ಕಾಲಕ್ರಮೇಣ ಪ್ರಾಂತೀಯ ಆಡಳಿತದ ಎಲ್ಲ ಕ್ಷೇತ್ರಗಳಿಗೂ ವ್ಯಾಪಿಸಿತು. ಹೀಗಾಗಿ ಕನ್ನಡದಲ್ಲಿ ಅನೇಕ ಆಂಗ್ಲ ಭಾಷೆಯ ಪದಗಳ ಸೇರ್ಪಡೆಯಾಯಿತು. ಸ್ವಾತಂತ್ರ್ಯೋತ್ತರ ಭಾರತದಲ್ಲಿ, ಭಾಷಾವಾರು ತಳಹದಿಯ ಮೇಲೆಯೇ ರಾಜ್ಯಗಳ ಪುನರ್‌ವಿಂಗಡನೆ ಆಗಬೇಕೆಂಬ ಮಾತನ್ನು 25–01–1948 ರಂದು ಮಹಾತ್ಮ ಗಾಂಧೀಜಿಯವರು ಘೋಷಿಸಿದರು. ಆಗಿನ ನಮ್ಮ ರಾಷ್ಟ್ರ ನಾಯಕರು ಮತ್ತು ಸಂವಿಧಾನ ಕರ್ತೃಗಳು ಸ್ವತಂತ್ರ ಭಾರತದ ಪ್ರಾಂತೀಯ ಭಾಷಾ ನೀತಿಯನ್ನು ಸಂವಿಧಾನದ ಮೂಲಕ ಎತ್ತಿ ಹಿಡಿದರು.

ಮುಂಬೈ ಕರ್ನಾಟಕ ಹೈದರಾಬಾದು ಕರ್ನಾಟಕದ ಜಿಲ್ಲೆಗಳು, ಮೈಸೂರು ಸಂಸ್ಥಾನ, ಬಳ್ಳಾರಿ ಪ್ರಾಂತ್ಯ, ಕೇಂದ್ರಾಡಳಿತಕ್ಕೊಳಪಟ್ಟಿದ್ದ ಕೊಡಗು ಜಿಲ್ಲೆಗಳನ್ನು ಒಳಗೊಂಡಂತೆ 1956ರ ನವೆಂಬರ್ 1 ರಂದು ನವ 'ಮೈಸೂರು ರಾಜ್ಯ ' ಉದಯವಾಯಿತು. ಮುಂದೆ 1973 ರಲ್ಲಿ ಅದನ್ನು ಕರ್ನಾಟಕವೆಂದು ಕರೆಯಲಾಯಿತು ರಾಜ್ಯಗಳ ಪುನರ್ವಿಂಗಡಣೆಯಿಂದಾಗಿ ಹಿಂದಿನ ಮುಂಬೈ, ಮದರಾಸು ಮತ್ತು ಹೈದರಾಬಾದು ಸಂಸ್ಥಾನಗಳಲ್ಲಿನ ಭಾಷಾಂತರ ಕಚೇರಿಗಳ ಕನ್ನಡ ವಿಭಾಗಗಳನ್ನು ನಮ್ಮ ರಾಜ್ಯ ಸರ್ಕಾರದ ಅಂದಿನ ಮುಖ್ಯ ಭಾಷಾಂತರಕಾರರ ಕಚೇರಿಯೊಂದಿಗೆ ಸೇರಿಸಲಾಯಿತು. ಕರ್ನಾಟಕ ರಾಜ್ಯದ ಉದಯದೊಂದಿಗೆ ಎಲ್ಲಾ ಕೇಂದ್ರ ಮತ್ತು ರಾಜ್ಯ ಶಾಸನಗಳ

ಭಾಷಾಂತರ ಕಾರ್ಯವಷ್ಟೇ ಅಲ್ಲದೆ ಅವುಗಳನ್ನು ಹೆಚ್ಚು ಕರಾರುವಕ್ಕಾಗಿ ಮತ್ತು ಹೆಚ್ಚು ಜಾಗರೂಕತೆಯಿಂದ ಭಾಷಾಂತರ ಮಾಡಬೇಕಾದ ಗುರುತರ ಜವಾಬ್ದಾರಿಯನ್ನು ಕೂಡ ಈ ಮುಖ್ಯ ಭಾಷಾಂತರಕಾರರ ಕಚೇರಿಗೆ ವಹಿಸಿಕೊಡಲಾಯಿತು.

ಕರ್ನಾಟಕ ಸರ್ಕಾರವು 1963 ರಲ್ಲಿ ರಾಜಭಾಷಾ ಅಧಿನಿಯಮವನ್ನು ಜಾರಿಗೆ ತರುವ ಮೂಲಕ ಕನ್ನಡವನ್ನು ರಾಜ್ಯದ ಆಡಳಿತ ಭಾಷೆಯೆಂದು ಅಧಿಕೃತವಾಗಿ ಘೋಷಿಸಿತು. ಸರ್ಕಾರದ ಆಡಳಿತ ಭಾಷಾ ನೀತಿಗನುಗುಣವಾಗಿ, ಸರ್ಕಾರವು 1973 ರಲ್ಲಿ ಮುಖ್ಯ ಭಾಷಾಂತರಕಾರರ ಕಚೇರಿಯನ್ನು ಪುನರ್ ಸಂಘಟಿಸಿ 'ಭಾಷಾಂತರ ನಿರ್ದೇಶನಾಲಯ' ವನ್ನಾಗಿ ರೂಪಿಸಿತು. ಜೊತೆಗೆ ಕೇಂದ್ರದ ಮಾದರಿಯಲ್ಲಿಯೇ, ಕರ್ನಾಟಕ ಸರ್ಕಾರವು 1973 ರಲ್ಲಿ ಕಾನೂನು ಮತ್ತು ಭಾಷಾ ತಜ್ಞರನ್ನೊಳಗೊಂಡ ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗ ವನ್ನು ರಚಿಸಿತು.

1977ರಲ್ಲಿ ಕರ್ನಾಟಕ ಸರ್ಕಾರವು **'ಭಾಷಾ ನಿರ್ದೇಶನಾಲಯ'** ವನ್ನು ಪುನ: ಸಂಘಟಿಸಿ ಈಗಿನ ' ಭಾಷಾಂತರ ನಿರ್ದೇಶನಾಲಯ ' ವನ್ನಾಗಿ ರೂಪಿಸಿ ಸ್ವತಂತ್ರ ಇಲಾಖೆಯ ಸ್ಥಾನ–ಮಾನ ನೀಡಿತು. ಕನ್ನಡವನ್ನು ಸರ್ಕಾರದ ಎಲ್ಲಾ ಹಂತಗಳಲ್ಲೂ ಆಡಳಿತ ಭಾಷೆಯಾಗಿ ಜಾರಿಗೆ ತರುವ ರಾಜ್ಯ ಸರ್ಕಾರದ ನೀತಿಯ ಅನ್ವಯ ಸೂಕ್ಷ್ಮಾತಿಸೂಕ್ಷ್ಮವಾಗಿ ಹೆಣೆದುಕೊಂಡ – ಗಹನ ವಿಚಾರಧಾರೆಗಳ ಕಾನೂನು ವಿಷಯದ ಕೇಂದ್ರ / ರಾಜ್ಯ ಅಧಿನಿಯಮಗಳನ್ನು ಮತ್ತು ಅವುಗಳ ಅಡಿಯಲ್ಲಿ ರಚಿಸಿದ ನಿಯಮಗಳನ್ನು ಭಾಷಾಂತರ ಮಾಡುವ ಪ್ರಮುಖ ಹೊಣೆ ಹೊತ್ತುಕೊಂಡಿತು. ಅದರ ಜೊತೆಗೆ ಸರ್ಕಾರದ ಅಧಿಸೂಚನೆಗಳು, ಅಧಿಕೃತ ಜ್ಞಾಪನಗಳು, ರಾಜ್ಯಾಡಳಿತ ವರದಿಗಳು, ಸಿಎಜಿ ವರದಿಗಳು, ಪಿಎಸಿ ವರದಿಗಳು, ವಿಚಾರಣಾ ಆಯೋಗದ ವರದಿಗಳು, ವಿಷಯ ಸಮಿತಿಗಳ ವರದಿಗಳು, ಸಚಿವ ಸಂಪುಟದ ಟಿಪ್ಪಣಿಗಳು, ಇಲಾಖೆಗಳ ಕ್ರಿಯಾ ಯೋಜನೆಗಳು, ನ್ಯಾಯಾಲಯಗಳ ಮೊಕದ್ದಮೆಗಳಲ್ಲಿ ಅಡಕವಾಗಿರುವ ಸಂಕೀರ್ಣ ಸ್ವರೂಪದ ವಿಷಯಗಳು, ಅಧೀನ ನ್ಯಾಯಾಲಯ ತೀರ್ಪುಗಳು, ವಾರ್ಷಿಕ ವರದಿಗಳು, ವಾರ್ಷಿಕ ಆಡಳಿತ ವರದಿಗಳು, ಪ್ರತಿವರ್ಷ ಸದನದ ಮುಂದು ಸಲ್ಲಿಸಲು ಸಿದ್ಧಪಡಿಸುವ ಬಜೆಟ್ ಮತ್ತು ರಾಜ್ಯಪಾಲರ ಭಾಷಣಗಳನ್ನು ಕನ್ನಡ ಭಾಷೆಗೆ ' ಆವೃತ್ತಿಗಳನ್ನು ಭಾಷಾಂತರಿಸುತ್ತಾ ಬಂದಿದೆ.

ಈ ಮೇಲ್ಕಂಡ ವಿವಿಧ ಸ್ವರೂಪದ ವಿಷಯಗಳ ಇಂಗ್ಲೀಷ್ – ಕನ್ನಡ ಹಾಗೂ ಕನ್ನಡ – ಇಂಗ್ಲೀಷ್ ಭಾಷಾಂತರ ಕಾರ್ಯವನ್ನು ನಿರ್ವಹಿಸುವುದರ ಜೊತೆಗೆ ಭಾಷಾಂತರ ನಿರ್ದೇಶನಾಲಯದಲ್ಲಿ ಅಲ್ಪ ಸಂಖ್ಯಾತ ಭಾಷೆಗಳ ಭಾಷಾಂತರ ಕಾರ್ಯದ ವ್ಯವಸ್ಥೆ ಕೂಡ ಇದೆ. ಹಿಂದಿ, ಮರಾಠಿ, ಉರ್ದು, – ಭಾಷೆಗಳಲ್ಲಿ ಸಾರ್ವಜನಿಕರು ಸರ್ಕಾರಕ್ಕೆ ಸಲ್ಲಿಸುವ ಮನವಿಗಳ ಭಾಷಾಂತರ ಹಾಗೂ ಕೇಂದ್ರ / ರಾಜ್ಯ ಕಾಯ್ದೆಗಳು ಮತ್ತು ಅವುಗಳಿಗೆ ಸಂಬಂಧಿಸಿದ ನಿಯಮಗಳ ಸಾರಾಂಶವನ್ನು ಅಲ್ಪ ಸಂಖ್ಯಾತ ಭಾಷೆಗಳಲ್ಲಿ ಸಿದ್ಧಪಡಿಸುವ ವ್ಯವಸ್ಥೆಯೂ ಇತ್ತು.

ಭಾಷಾಂತರ ಇಲಾಖೆಯು ಬೆಳೆದು ಬಂದ ದಾರಿಯನ್ನು ಅವಲೋಕಿಸಿದರೆ – ಚಾರಿತ್ರಿಕವಾದ ರೋಚಕ ತಿರುವುಗಳ ಸರಮಾಲೆಯೇ ಇದಕ್ಕೆ ಇದೆ. ಆ ಜಾಡನ್ನು ಹಿಡಿದು ಹುಡುಕಿಕೊಂಡು ಹೋದರೆ, 1914 ಕ್ಕಿಂತ ಹಿಂದೆಯೇ ಇದು ಅಸ್ತಿತ್ವದಲ್ಲಿದ್ದ ಬಗ್ಗೆ ನಮಗೆ ದಾಖಲೆಗಳು ಸಿಗುತ್ತವೆ. ಬ್ರಿಟಿಷ್ ಪ್ರಾಂತ್ಯಗಳಲ್ಲಿ ಓರಿಯಂಟಲ್ ಟ್ರಾನ್ಸ್‌ಲೇಟರುಗಳ ಕಚೇರಿಗಳಿದ್ದವು. ಪ್ರಜಾಪ್ರತಿನಿಧಿ ಸಭೆ ಹಾಗೂ ನ್ಯಾಯವಿಧಾಯಕ ಸಭೆಗಳಲ್ಲಿ ಭಾಷಾಂತರಕಾರರು ಪ್ರಮುಖ ಪಾತ್ರ ವಹಿಸುತ್ತಿದ್ದ ನಿದರ್ಶನಗಳಿವೆ. ಕಚೇರಿ ಕಡತದ ಮೂಲಕ ಸಿಕ್ಕ ಮಾಹಿತಿಯ ಪ್ರಕಾರ 1924 ಕ್ಕೂ ಮೊದಲೇ ಮೈಸೂರು ಮಹಾರಾಜರ ಆಡಳಿತ ಕಾಲದ General and Revenue Departments ಅಡಿಯಲ್ಲಿ ಒಬ್ಬ ಸೂಪರಿಂಟೆಂಡೆಂಟು ಮತ್ತು 8 ಜನ ಗುಮಾಸ್ತರನ್ನೊಳಗೊಂಡ ತಂಡ ಕನ್ನಡ ಭಾಷಾಂತರ ಶಾಖೆಯಂತೆ ಕಾರ್ಯ ನಿರ್ವಹಿಸುತ್ತಿತ್ತು. 09–07–1925ರ ಸರ್ಕಾರಿ ಆದೇಶದ ಪ್ರಕಾರ ಭಾಷಾಂತರ ಕಾರ್ಯವು ವಿಶಿಷ್ಟವೂ, ತಾಂತ್ರಿಕ ಸ್ವರೂಪದ್ದೂ ಆಗಿದ್ದರಿಂದಾಗಿ, ಸದರಿ ಭಾಷಾಂತರ ಶಾಖೆಯನ್ನೇ ಸರ್ಕಾರದ ಕನ್ನಡ ಭಾಷಾಂತರಕಾರರ ಕಚೇರಿ ಎಂದು ಪುನರ್ ರಚಿಸುವ ಮೂಲಕ ಕೆಲಸದ ಸ್ವರೂಪವನ್ನು ಅನುಲಕ್ಷಿಸಿ, ಅದಕ್ಕೊಂದು ಸ್ಪಷ್ಟರೂಪ ಕೊಡಲಾಯಿತು. ಸಾಮಾನ್ಯ ಮತ್ತು ಕಂದಾಯ ಸಚಿವಾಲಯದಲ್ಲಿ ಆಗ ಹಿರಿಯ ಗುಮಾಸ್ತನಾಗಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಎಚ್. ಎನ್. ಶಂಕರ ಶಾಸ್ತ್ರಿ ಅವರನ್ನು ಮೊದಲ ಸಹಾಯಕ ಭಾಷಾಂತರಕಾರನಾಗಿ ನೇಮಕ ಮಾಡಿದ ಮಾಹಿತಿ ನಮಗೆ ಸಿಗುತ್ತದೆ.

ಹಾಗೆಯೇ, 1924 ರ ಹೊತ್ತಿಗೆ ಕಚೇರಿಯ ಮುಖ್ಯಸ್ಥರಾಗಿ ಭಾಷಾಂತರಕಾರ ಹುದ್ದೆಯಲ್ಲಿ ಶ್ರೀ ಸಿ.ಕೆ. ವೆಂಕಟರಾಮಯ್ಯನವರು ಇದ್ದ ಬಗ್ಗೆ ದಾಖಲೆ ಸಿಗುತ್ತವೆ. ಮೈಸೂರು ಮಹಾರಾಜರಿಂದ ' ರಾಜಸೇವಾಸಕ್ತ ' ಬಿರಿದಾಂಕಿತರೂ, ಭಾರತ ಸರ್ಕಾರದಿಂದ 'ಪದ್ಮಶ್ರೀ' ಪ್ರಶಸ್ತಿ ಪುರಸ್ಕೃತರೂ ಆದ ಅವರು ಸ್ವತ: ಉತ್ತಮ ಸಾಹಿತಿ, ವಿಮರ್ಶಕ, ವಾಗ್ಮಿಯೆಂದೇ ಹೆಸರು ಮಾಡಿದ್ದರು. ಮಂಡೋದರಿ (ನಾಟಕ), ಆಳಿದ ಮಹಾಸ್ವಾಮಿಗಳು (ಜೀವನ ಚರಿತ್ರೆ) ಸಾವಿರದೊಂದು ರಾತ್ರಿ (ಅರೇಬಿಯನ್ ನೈಟ್ಸ್ ಕನ್ನಡಾನುವಾದ), ನಮ್ಮ ಸಮಾಜ, ಹಳ್ಳಿಯ ಕತೆಗಳು – ಇವು ಪ್ರಮುಖ ಕೃತಿಗಳು. ಅದರಂತೆ, ಮಹಾರಾಜರ ಆ ಆಳ್ವಿಕೆಯಲ್ಲಿ ಭಾಷಾಂತರ ಕಾರ್ಯ ಚಟುವಟಿಕೆಗಳಿಗೆ ವಿಶೇಷ ಮಹತ್ವ ನೀಡಿದ್ದು ಸ್ವತ: ಸಾಹಿತಿಯೂ ಆಗಿದ್ದಂಥ' ಸಿ.ಕೆ. ವೆಂಕಟರಾಮಯ್ಯನವರ ಆಗಿನ ಭಾಷಾಂತರ ಕಾರ್ಯಗಳು ಆಡಳಿತಾತ್ಮಕ ದೃಷ್ಟಿಯಿಂದಷ್ಟೇ ಅಲ್ಲ ಭಾಷೆ – ಸಾಹಿತ್ಯಗಳ ದೃಷ್ಠಿಯಿಂದಲೂ' ಇಂದಿಗೂ ಅಮೂಲ್ಯ ದಾಖಲೆಗಳಾಗಿ ಉಳಿದಿವೆ.

1950 ರ ಸುಮಾರಿಗೆ, ಇಲಾಖೆಗೆ ಇನ್ನಷ್ಟು ಸ್ಪಷ್ಟ ರೂಪ ನೀಡಿ, ಹೆಚ್ಚು ಜನ ಸಿಬ್ಬಂದಿಯನ್ನು ಒದಗಿಸುವ ಮೂಲಕ ಕೇಂದ್ರ–ರಾಜ್ಯ ಶಾಸನಗಳನ್ನು ಭಾಷಾಂತರಿಸುವ ಪ್ರಮುಖ ಕಾರ್ಯವನ್ನೇ ಇಲಾಖೆಗೆ ವಹಿಸಿಕೊಡಲಾಯಿತು. ಸಿ. ಕೆ. ವೆಂಕಟರಾಮಯ್ಯನವರ ತರುವಾಯ ರಾಮರಾವ್, ಸಿ. ಆರ್. ಅನಂತರಾವ್ ಇವರುಗಳೂ ಸರ್ಕಾರದ ಭಾಷಾಂತರಕಾರರಾಗಿ ಸೇವೆ ಸಲ್ಲಿಸಿದರು.

1956 ರಲ್ಲಿ ರಾಜ್ಯ ಪುನರ್ ವಿಂಗಡನೆಯಾಗಿ 'ನವ ಮೈಸೂರು ರಾಜ್ಯ' ಮೈದಳೆದಾಗ ಬೆಂಗಳೂರನ್ನು ಕೇಂದ್ರ ಕಾರ್ಯಸ್ಥಾನವನ್ನಾಗಿರಿಸಿದಂತೆ ಈ ಇಲಾಖೆಯನ್ನು ಪುನರ್ ಸಂಘಟಿಸಲಾಯಿತು. ಹೈದರಾಬಾದ್ ಕರ್ನಾಟಕ, ಮುಂಬೈ ಕರ್ನಾಟಕದ ವಿವಿಧ ಜಿಲ್ಲೆಗಳಲ್ಲಿ ಹಾಗೂ ಮದರಾಸು ಪ್ರಾಂತ್ಯ ಹಳೆ ಮೈಸೂರು ಪ್ರಾಂತ್ಯಗಳಲ್ಲಿ ಸರಕಾರದ ಭಾಷಾಂತರ ಕೆಲಸ ಮಾಡುತ್ತಿದ್ದ ಸಿಬ್ಬಂದಿಯ ವರ್ಗಾವಣೆ, ವಿಲೀನ, ಪುನರ್ ರಚನೆಗಳೆಲ್ಲ ನಡೆದು ನ್ಯಾಯಾಂಗ ಇಲಾಖೆಯ ಅಧೀನದಲ್ಲಿರುವಂತೆ , ಕನ್ನಡ ಭಾಷಾಂತರಕಾರರ ಕಚೇರಿ ರೂಪುಗೊಂಡಿತು. ಕೆಲವು ವರ್ಷಗಳ ತರುವಾಯ ಅದು ಮುಖ್ಯ ಭಾಷಾಂತರಕಾರರ ಕಚೇರಿ ಎಂದು ಪುನರ್ ನಾಮಕರಣಗೊಂಡಿತು. ಈಗ ಗ್ರಂಥಾಲಯ ಇಲಾಖೆಯ ಒಂದು ಪ್ರಕಾರ್ಯವಾಗಿರುವ, ಪುಸ್ತಕಗಳ ನೋಂದಣಿ ಅಧಿನಿಯಮದ ಮೇರೆಗೆ ಖಾಸಗಿ ಪ್ರಕಾಶಕರಿಂದ

ಬಂದ ಪುಸ್ತಕಗಳ ಪರಿಶೀಲನೆ ಕಾರ್ಯವನ್ನೂ ಈ ಇಲಾಖೆಯೆ ಕೆಲ ವರ್ಷ ನಿರ್ವಹಿಸುತ್ತಿತ್ತು. ಆಗ ಇಲಾಖಾ ಮುಖ್ಯಸ್ಥರ ಹುದ್ದೆಯನ್ನು 'ಮುಖ್ಯ ಭಾಷಾಂತರಕಾರರು ಹಾಗೂ ಪದನಿಮಿತ್ತ ಪುಸ್ತಕ ಪರೀಕ್ಷಕರು' ಎಂದೇ ಹೆಸರಿಸಲಾಗಿತ್ತು. ನಂತರ ಆ ಕಾರ್ಯವನ್ನು ಗ್ರಂಥಾಲಯ ಇಲಾಖೆಗೆ ವರ್ಗಾಯಿಸಲಾಯಿತು.

1966ರ ಸುಮಾರಿನಲ್ಲಿಯೇ, ಮುಖ್ಯ ಭಾಷಾಂತರಕಾರರ ಕಚೇರಿಗೆ ಲಗತ್ತಾಗಿರುವಂತೆ ಕೇಂದ್ರದ ಮಾದರಿಯಲ್ಲಿ ತಜ್ಞರ ಸಮಿತಿಯೊಂದನ್ನು ರಚಿಸಲಾಯಿತು. ಅದರ ಮೊದಲ ಅಧ್ಯಕ್ಷರಾಗಿ ನಿವೃತ್ತ ನ್ಯಾಯಮೂರ್ತಿ ಎಸ್. ಎಸ್. ಮಳಿಮಠ್ ರವರು, ಸದಸ್ಯರುಗಳಾಗಿ ಎಂ. ಪಿ. ಎಲ್ ಶಾಸ್ತ್ರೀ, ವೆಂಕಟರಮಣ ಅಯ್ಯರ್, ಅಂದಾನಯ್ಯ ಪುರಾಣಿಕ ಅವರುಗಳಿದ್ದರು. ಈ ಸಮಿತಿಯೇ ಮುಂದೆ ರಾಜಭಾಷಾ(ವಿಧಾಯೀ) ಆಯೋಗವಾಗಿ ರೂಪುಗೊಂಡು ಮುಂದುವರಿಯಿತಲ್ಲದೆ, ಇಲಾಖೆಯು ಭಾಷಾಂತರಿಸಿದ ಕೇಂದ್ರ ಹಾಗೂ ರಾಜ್ಯ ಅಧಿನಿಯಮಗಳ ಭಾಷಾಂತರವನ್ನು ಪರಿಷ್ಕರಿಸಿ ಅವುಗಳ ಕನ್ನಡ ಅಧಿಕೃತ ಪಾಠಗಳನ್ನು ಸಿದ್ಧಪಡಿಸುವ ಮಹತ್ತರ ಕಾರ್ಯವನ್ನು ನಿರ್ವಹಿಸುತ್ತಾ ಬಂದಿದೆ.

1973 ರಲ್ಲಿ ರಾಜ್ಯಕ್ಕೆ ' ಕರ್ನಾಟಕ ' ಎಂದು ಪುನರ್ ನಾಮಕರಣಗೊಂಡ ಬೆನ್ನ ಹಿಂದೆಯೇ, ಭಾಷೆಯ ಅಭಿವೃದ್ಧಿಗೆ ಸಂಬಂಧಿಸಿದಂತೆ ಆ ಮೊದಲು ಪಠ್ಯ ಪುಸ್ತಕ ನಿರ್ದೇಶನಾಲಯದಲ್ಲಿದ್ದ ಕನ್ನಡ ಅಭಿವೃದ್ಧಿಯ ಕೆಲಸ ಕಾರ್ಯಗಳನ್ನು ಭಾಷಾಂತರ ಇಲಾಖೆಗೆ ವಹಿಸಿಕೊಡುವ ಮೂಲಕ, ' ಭಾಷಾ ಮತ್ತು ಕನ್ನಡ ಅಭಿವೃದ್ಧಿ ನಿರ್ದೇಶನಾಲಯ ' ಎಂಬ ಹೆಸರಿನಲ್ಲಿ ಇನ್ನೂ ವ್ಯಾಪಕವಾದ ಸ್ಥಾನಮಾನ ನೀಡಲಾಯಿತು. ಎಂ. ಕೇಶವಭಟ್ಟರು (ಮುಳಿಯ ತಿಮ್ಮಪ್ಪಯ್ಯನವರ ಮಕ್ಕಳು) ಮೊದಲ ನಿರ್ದೇಶಕರಾಗಿ ಅಧಿಕಾರ ವಹಿಸಿಕೊಂಡರು. ಈ ಸಂದರ್ಭದಲ್ಲಿಯೇ ಕನ್ನಡವನ್ನು ಆಡಳಿತ ಭಾಷೆಯಾಗಿ ಜಾರಿಗೆ ತರುವ ಗುರುತರವಾದ ಹೊಣೆಯನ್ನು ಈ ಇಲಾಖೆಗೆ ವಹಿಸಲಾಯಿತು. ಕಾರ್ಯಭಾರಕ್ಕನುಸಾರವಾಗಿ ಹೆಚ್ಚು ಹುದ್ದೆಗಳೂ ಸೃಜಿಸಲ್ಪಟ್ಟು – ಅಗಾಧ ಪ್ರಮಾಣದಲ್ಲಿ ಇಲಾಖೆಯ ವಿಸ್ತರಣೆಗೆ ಪ್ರಯತ್ನಗಳು ನಡೆದವು.

1975 ರ ಅಕ್ಟೋಬರಿನಲ್ಲಿ ಕೇಶವ ಭಟ್ಟರ ನಿವೃತ್ತಿಯ ನಂತರ, ಹಿರಿಯ ಕೆ. ಎ. ಎಸ್ ಅಧಿಕಾರಿ ಜಯತೀರ್ಥ ರಾಜಪುರೋಹಿತರು ಈ ಇಲಾಖೆಯ ನಿರ್ದೇಶಕರಾಗಿ ಬಂದರು. ಸ್ವತ: ಸಾಹಿತಿಯೂ ಆಗಿದ್ದ ರಾಜಪುರೋಹಿತರ ಕಾಲದಲ್ಲಿಯೇ ಕಲೆ ಮತ್ತು ಸಂಸ್ಕೃತಿಗೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳನ್ನು ಕುಡ ಈ ಇಲಾಖೆಗೆ ವಹಿಸಲಾಯಿತು. ಸಾಹಿತ್ಯ ಮತ್ತು ಕಲೆಗೆ ಸಂಬಂಧಿಸಿದ ಕಾರ್ಯ ಚಟುವಟಿಕೆಗಳನ್ನು ಕೂಡ ಸಾರ್ವಜನಿಕ ಶಿಕ್ಷಣ ಇಲಾಖೆ ನೋಡಿಕೊಳ್ಳುತ್ತಿತ್ತು. ಅದೇ ಅವಧಿಯಲ್ಲಿ ಈ ಇಲಾಖೆಯ ಮೇಲ್ವಿಚಾರಣೆಯಲ್ಲಿ ವಿವಿಧ ಅಕಾಡೆಮಿಗಳ ರಚನೆಯಾಯಿತು.

ಆದರೆ, ಭಾಷಾಂತರಕ್ಕೆ ಸಂಬಂಧಿಸಿದ ಕೆಲಸ ಕಾರ್ಯಗಳು ತ್ವರಿತಗತಿಯಲ್ಲಿ ನಡೆಯುತ್ತಿಲ್ಲವೆಂಬ ಕಾರಣ ನೀಡಿ. ಅದನ್ನೇ ನೆಪವಾಗಿಸಿಕೊಂಡ ಕೆಲವು ಹಿರಿಯ ಅಧಿಕಾರಿಗಳ ಪ್ರತಿಷ್ಠೆಗಿಳಿದ ಪರಿಣಾಮವಾಗಿ, 1977ರ ಸೆಪ್ಟೆಂಬರ್ ನಲ್ಲಿ ಭಾಷಾಂತರ ನಿರ್ದೇಶನಾಲಯ ಹಾಗೂ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯಗಳೆಂದು ಹೆಸರಿಸುವ ಮೂಲಕ ಇಲಾಖೆಯನ್ನು ವಿಭಜಿಸಲಾಯಿತು. ಅಧಿಕೃತವಾಗಿ ಭಾಷಾಂತರಕ್ಕೆ ಸಂಬಂಧಿಸಿದ ಎಲ್ಲ ಕೆಲಸ ಕಾರ್ಯಗಳನ್ನು ಭಾಷಾಂತರ ನಿರ್ದೇಶನಾಲಯಕ್ಕೆ ವಹಿಸುವ ಮೂಲಕ, ಇದನ್ನು ಕಾನೂನು ಮತ್ತು ಸಂಸದೀಯ ವ್ಯವಹಾರಗಳ ಸಚಿವಾಲಯದ ಅಡಿಯಲ್ಲಿ ಇರಿಸಲಾಯಿತು.

'ಭಾಷಾಂತರ ನಿರ್ದೇಶನಾಲಯದ ಪ್ರಥಮ ನಿರ್ದೇಶಕರಾಗಿ ಕಂಠೀರಾವ್ ನಿಯುಕ್ತರಾದರು. ನಿವೃತ್ತಿಯ ಅಂಚಿನಲ್ಲಿ ಬರವಣಿಗೆಗೆ ತೊಡಗಿದ್ದ ಅವರು ಕನ್ನಡದಲ್ಲಿ ಕೆಲವು ಕಾನೂನು ಪುಸ್ತಕಗಳನ್ನು ಬರೆದು ಜನಪ್ರಿಯತೆಯನ್ನೂ ಗಳಿಸಿದರು. ಅಲ್ಲಿಂದ ಇಲಾಖೆಯಲ್ಲಿ ಯಾವುದೇ ಪ್ರಮುಖ ಬೆಳವಣಿಗೆ ಬದಲಾವಣೆಗಳು ಅಷ್ಟಾಗಿ ಕಾಣಿಸಿಕೊಳ್ಳಲಿಲ್ಲ. ಕಂಠೀರಾವ್ ನಂತರದಲ್ಲಿ ಶೇಷಗಿರಿರಾವ್ ಡಾ: ಕೆ. ರಂಗಪ್ಪ, ಎಸ್. ಎಸ್. ಕೋಡ್ಕಣಿ, ಎನ್. ನರಸಿಂಹರಾವ್, ಬೇಲೂರು ಜವರಯ್ಯ ಅವರುಗಳು ನಿರ್ದೇಶಕರಾಗಿ ಸೇವೆ ಸಲ್ಲಿಸಿದರು. ಕೆ. ಎನ್. ಜಯಶ್ರೀ ಪ್ರಸ್ತುತ ನಿರ್ದೇಶಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

## ಅಧ್ಯಾಯ –3

### ಭಾಷಾಂತರ ನಿರ್ದೇಶನಾಲಯದ ಸಂಘಟನೆ, ಪ್ರಕಾರ್ಯಗಳು ಮತ್ತು ಕರ್ತವ್ಯಗಳು

1. ಭಾಷಾಂತರ ನಿರ್ದೇಶನಾಲಯವು ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನಾ ಇಲಾಖೆ, ಕರ್ನಾಟಕ ಸರ್ಕಾರ ಇದರ ಆಡಳಿತ ವ್ಯಾಪ್ತಿಗೆ ಒಳಪಡುವ ಒಂದು ಇಲಾಖೆಯಾಗಿದೆ. ನಿರ್ದೇಶಕರು ಇಲಾಖೆಯ ಮುಖ್ಯಸ್ಥರಾಗಿದ್ದು 3 ಉಪ ನಿರ್ದೇಶಕರು, 5 ಸಹಾಯಕ ನಿರ್ದೇಶಕರು, 1 ಆಡಳಿತಾಧಿಕಾರಿ, 6 ಸಂಶೋಧನಾಧಿಕಾರಿಗಳು, 1 ಸಹಾಯಕ ಆಡಳಿತಾಧಿಕಾರಿ, 1 ನಿರ್ದೇಶಕರ ಗೆಜೆಟೆಡ್ ಆಪ್ತ ಸಹಾಯಕರು, 34 ಭಾಷಾಂತರಕಾರರು (ಕನ್ನಡ) 2 ಹಿಂದಿ ಭಾಷಾಂತರಕಾರರು, 1 ಮರಾಠಿ ಭಾಷಾಂತರಕಾರರು , 1 ಉರ್ದು ಭಾಷಾಂತರಕಾರರು, 9 ಶೀಘ್ರಲಿಪಿಗಾರರು, 1 ಹಿರಿಯ ಬೆರಳಚ್ಚುಗಾರರು, 5 ಬೆರಳಚ್ಚುಗಾರರು (ಕನ್ನಡ) ,1 ಉರ್ದು ಬೆರಳಚ್ಚುಗಾರ, 1 ಮರಾಠೀ ಬೆರಳಚ್ಚುಗಾರ, 3 ಪ್ರಥಮ ದರ್ಜೆ ಸಹಾಯಕರು, 5 ದ್ವಿತೀಯ ದರ್ಜೆ ಸಹಾಯಕರು, 1 ವಾಹನ ಚಾಲಕ, 2 ಅಟೆಂಡರ್, 9 ದಲಾಯತ್, 1 ಸ್ವೀಪರ್ ಹಾಗೂ ಸ್ಕಾವೆಂಜರ್, 1 ರಾತ್ರಿ ಕಾವಲುಗಾರ ಸೇರಿದಂತೆ 95 ಮಂಜೂರಾದ ಹುದ್ದೆಗಳಿದ್ದು 82 ಸಿಬ್ಬಂದಿ ಕಾರ್ಯನಿರ್ವಹಿಸುತ್ತಿದ್ದಾರೆ. 13 ಹುದ್ದೆಗಳು ಖಾಲಿಇವೆ.

### ನಿರ್ದೇಶನಾಲಯದ ಪ್ರಕಾರ್ಯಗಳು ಮತ್ತು ಕರ್ತವ್ಯಗಳು

1. ಕರ್ನಾಟಕ ಅಧಿನಿಯಮಗಳ ಕನ್ನಡಕ್ಕೆ ಭಾಷಾಂತರಿಸಿ ಕರ್ನಾಟಕ ರಾಜಭಾಷಾ ಅಧಿನಿಯಮ, 1963ರ ಅಡಿಯಲ್ಲಿ ಪ್ರಕಟಿಸಲು ಸಿದ್ದಪಡಿಸುವುದು;

2. ಕೇಂದ್ರ ಅಧಿನಿಯಮಗಳನ್ನು ಕನ್ನಡಕ್ಕೆ ಭಾಷಾಂತರಿಸಿ Authoritative Texts (Central Laws) Act, 1973 ಇದರಡಿಯಲ್ಲಿ ಪ್ರಕಟಿಸಲು ಸಿದ್ಧಪಡಿಸುವುದು.

3. ಸರ್ಕಾರಿ ಆದೇಶಗಳು, ಅಧಿಸೂಚನೆಗಳು, ಅಧಿಕೃತ ಜ್ಞಾಪನಗಳು, ಶಾಸನಾತ್ಮಕ ಆದೇಶಗಳು, ಸುತ್ತೋಲೆಗಳು, ವಿಷಯ ಸಮಿತಿ ವರದಿಗಳು, ವಿಚಾರಣಾ ಆಯೋಗದ ವರದಿಗಳು, ವಾರ್ಷಿಕ ವರದಿಗಳು, ಸಿ. ಎ. ಜಿ ವರದಿಗಳು, ಪಿ. ಎ. ಸಿ. ವರದಿಗಳು, ಸಚಿವ ಸಂಪುಟದ ಟಿಪ್ಪಣಿಗಳ. ಇಲಾಖೆಗಳ ಕ್ರಿಯಾ ಯೋಜನೆಗಳು ಮತ್ತು ಸಚಿವಾಲಯದ ಇಲಾಖೆಗಳು ಹಾಗೂ ಇಲಾಖಾ ಮುಖ್ಯಸ್ಥರು

ಕಳುಹಿಸಿಕೊಡುವ ವಿಷಯಗಳು ಇವುಗಳನ್ನು ರಾಜಭಾಷೆ ನೀತಿಯನ್ವಯ ಕನ್ನಡದಿಂದ ಆಂಗ್ಲ ಭಾಷೆಗೆ ಹಾಗೂ ಆಂಗ್ಲ ಭಾಷೆಯಿಂದ ಕನ್ನಡಕ್ಕೆ ಭಾಷಾಂತರಿಸುವುದು;

4. ರಾಜ್ಯದ ವಿವಿಧ ಸ್ಥಳಗಳಲ್ಲಿ ಭಾಷಾ ಅಲ್ಪ ಸಂಖ್ಯಾತರು ಅಂದರೆ ಮರಾಠಿ ಹಾಗೂ ಉರ್ದು ಭಾಷೆಯ ಅಲ್ಪ ಸಂಖ್ಯಾತರು ಶೇಕಡ 15 ಅಥವಾ ಅದಕ್ಕೂ ಹೆಚ್ಚಾಗಿರುವ ಸ್ಥಳಗಳಲ್ಲಿ ವ್ಯಾಪಕ ಪ್ರಚಾರ ನೀಡುವ ಸಲುವಾಗಿ ಪ್ರಮುಖ ಸರ್ಕಾರಿ ಆದೇಶಗಳು, ಅಧಿಸೂಚನೆಗಳು ಹಾಗೂ ನಿಯಮಗಳ ಭಾಷಾಂತರಗಳನ್ನು ಮರಾಠಿ ಹಾಗೂ ಉರ್ದು ಭಾಷೆಗಳಲ್ಲಿ ಸಿದ್ಧಪಡಿಸುವುದು. ((ಹಿಂದಿ, ಮರಾಠಿ ಮತ್ತು ಉರ್ದು ಭಾಷಾಂತರಕಾರರ ಹುದ್ದೆಗಳು ಖಾಲಿ ಇದ್ದು ರೀತಿಯ ವಿಷಯಗಳು ಈಗ ಬರುತ್ತಿಲ್ಲವಾದ್ದರಿಂದ ಹುದ್ದೆಗಳನ್ನು ತುಂಬಿರುವುದಿಲ್ಲ. ಹಾಗಾಗಿ ಈ ಭಾಷಾಂತರ ಕಾರ್ಯ ಈಗ ನಡೆಯುತ್ತಿಲ್ಲ)

5. ನ್ಯಾಯಾಲಯದ ವಿಷಯಗಳನ್ನು ಕನ್ನಡದಿಂದ ಆಂಗ್ಲ ಭಾಷೆಗೆ ಹಾಗೂ ಆಂಗ್ಲ ಭಾಷೆಯಿಂದ ಕನ್ನಡ ಭಾಷೆಗೆ ಭಾಷಾಂತರಿಸುವುದು.

**2. ಕರ್ನಾಟಕ ರಾಜಭಾಷಾ(ವಿಧಾಯೀ) ಆಯೋಗ**

ಕರ್ನಾಟಕ ರಾಜಭಾಷಾ(ವಿಧಾಯೀ) ಆಯೋಗವು, ಭಾಷಾಂತರ ನಿರ್ದೇಶನಾಲಯವು ಸಿದ್ಧಪಡಿಸಿದ ರಾಜ್ಯ ಹಾಗೂ ಕೇಂದ್ರ ಅಧಿನಿಯಮಗಳ ಕನ್ನಡ ಭಾಷಾಂತರವನ್ನು ಪರಿಶೀಲಿಸಿ ಅಧಿಕೃತ ಕನ್ನಡ ಪಾಠಗಳನ್ನು ಸಿದ್ಧಪಡಿಸುವ ಕಾರ್ಯವನ್ನು ನಿರ್ವಹಿಸುತ್ತದೆ.

ಶ್ರೀ ಆರ್ ನಾವೂರ್‌ಕರ್ ರವರು ಪ್ರಸ್ತುತ ಆಯೋಗದ ಆಧ್ಯಕ್ಷರು, ಶ್ರೀ ಎಂ. ವೈ ದೊಡಮನಿ, ಶ್ರೀ ಟಿ. ಆರ್. ಮಹದೇವಯ್ಯ, ಶ್ರೀ ಹೆಚ್. ಎಸ್. ರಾಜಶೇಖರ್, ಶ್ರೀ ಪಾಂಡುರಂಗನಾಯಕ್ ಇವರುಗಳು ಸದಸ್ಯರು.

## ಅಧ್ಯಾಯ –4

## ಭಾಷಾಂತರ ನಿರ್ದೇಶನಾಲಯದ ಅಧಿಕಾರಿಗಳು ಮತ್ತು ನೌಕರರ ಅಧಿಕಾರಗಳು ಮತ್ತು ಕರ್ತವ್ಯಗಳು

**ನಿರ್ದೇಶಕರು:**

ಇಲಾಖಾ ಮುಖ್ಯಸ್ಥರು, ಇಲಾಖೆಯ ಕೆಲಸ ಕಾರ್ಯಗಳ ಸುಸೂತ್ರ ನಿರ್ವಹಣೆ ಸಿಬ್ಬಂದಿಗೆ ನಿರ್ದೇಶನ, ಪೂರ್ಣ ನಿಯಂತ್ರಣ ಮತ್ತು ಆಡಳಿತ, ಸಮಗ್ರ ಪರಿವೀಕ್ಷಣೆ ಮತ್ತು ಉಸ್ತುವಾರಿ, ಇಲಾಖೆ ಮತ್ತು ರಾಜಭಾಷಾ(ವಿಧಾಯೀ) ಆಯೋಗದ ನಡುವೆ ಸಮನ್ವಯ.

**ಉಪ ನಿರ್ದೇಶಕರು: ಆಡಳಿತಾತ್ಮಕ ವಿಷಯಗಳ ಭಾಷಾಂತರ ಶಾಖೆ**

ಆಡಳಿತಾತ್ಮಕ ವಿಷಯಗಳ ಭಾಷಾಂತರ ಶಾಖೆಯ ಮುಖ್ಯಸ್ಥರು.

ಸರ್ಕಾರಿ ಆದೇಶಗಳು, ಅಧಿಸೂಚನೆಗಳು, ಅಧಿಕೃತ ಜ್ಞಾಪನಗಳು, ಶಾಸನಾತ್ಮಕ ಆದೇಶಗಳು, ಸುತ್ತೋಲೆಗಳು, ಕೆಸಿಎಸ್‌ಆರ್, ಕೆಎಫ್‌ಸಿ, ಕೆಟಿಸಿ, ಎಂಸಿಇ, ಬಜೆಟ್ ಕೈಪಿಡಿ ನಮೂನೆಗಳು, ಇಲಾಖೆಗಳ ಕ್ರಿಯಾ ಯೋಜನೆಗಳು, ಸಚಿವ ಸಂಪುಟದ ಟಿಪ್ಪಣಿಗಳು, ವಿಷಯ ಸಮಿತಿ ವರದಿಗಳು, ವಿಚಾರಣಾ ಆಯೋಗದ ವರದಿಗಳು, ವಾರ್ಷಿಕ ವರದಿಗಳು, ಸಿಎಜಿ ವರದಿಗಳು, ಪಿಎಸಿ ವರದಿಗಳು, ಉನ್ನತಾಧಿಕಾರದ ಸಮಿತಿಗಳ, ಇತರ ಸಮಿತಿಗಳ ವರದಿಗಳು, ರಾಜ್ಯ ನೀತಿ ವಿಷಯಗಳು ಇತ್ಯಾದಿಗಳ ಕನ್ನಡ ಭಾಷಾಂತರ, ಭಾಷಾಂತರ ಕಾರ್ಯ ಮತ್ತು ರವಾನೆ ಕುರಿತಂತೆ ಸರ್ಕಾರದ ಇಲಾಖೆಗಳೊಂದಿಗೆ ಪತ್ರ ವ್ಯವಹಾರ. ಆಡಳಿತಾತ್ಮಕ ವಿಷಯಗಳ ಭಾಷಾಂತರ ಪ್ರಗತಿ ಕುರಿತ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ..

ಶಾಖೆಯ ಮೇಲೆ ನಿಯಂತ್ರಣ, ಪರಿವೀಕ್ಷಣೆ ಮತ್ತು ಉಸ್ತುವಾರಿ.

**ಉಪನಿರ್ದೇಶಕರು: ಕೇಂದ್ರ ಶಾಸನ ಶಾಖೆ**

ಕೇಂದ್ರ ಶಾಸನ ಶಾಖೆ ಮುಖ್ಯಸ್ಥರು

ಕೇಂದ್ರ ಅಧಿನಿಯಮಗಳ ಕನ್ನಡ ಭಾಷಾಂತರ ಕೇಂದ್ರ ಅಧಿನಿಯಮಗಳ ಭಾಷಾಂತರ ಕುರಿತಂತೆ ಕೇಂದ್ರ ಸರ್ಕಾರದ ಅಧಿಕೃತ ಭಾಷೆಗಳ ವಿಭಾಗದೊಂದಿಗೆ ಪತ್ರ ವ್ಯವಹಾರ. ಕೇಂದ್ರ ಅಧಿನಿಯಮಗಳ ಕರಡಚ್ಚುಗಳನ್ನು ಓದುವುದು, ತಾಳೆ ನೋಡುವುದು, ಅಡಿ ಟಿಪ್ಪಣಿಗಳ ಅಳವಡಿಕೆ ಇತ್ಯಾದಿ ಕೆಲಸಗಳ ನಿರ್ವಹಣೆ.

ಕೇಂದ್ರ ಶಾಸನಗಳ (ಅಧಿಕೃತ ಪಾಠಗಳ) ಅಧಿನಿಯಮ, 1973ರ 2(ಎ) ಪ್ರಕರಣದ ಅಡಿಯಲ್ಲಿ ಕೇಂದ್ರ ಅಧಿನಿಯಮಗಳ ಕನ್ನಡ ಆವೃತ್ತಿಗಳ ಮುದ್ರಣಕ್ಕೆ ಸಂಬಂಧಿಸಿದ ಎಲ್ಲ ಕೆಲಸ ಕಾರ್ಯಗಳ ನಿರ್ವಹಣೆ. ಕೇಂದ್ರ ಸರ್ಕಾರದ ಅಧಿಕೃತ ಭಾಷೆಗಳ ವಿಭಾಗದೊಂದಿಗೆ ಪತ್ರ ವ್ಯವಹಾರ. ರಾಜ್ಯ ಅಧಿನಿಯಮಗಳ ಕನ್ನಡ ಆವೃತ್ತಿಗಳ ಮುದ್ರಣ ಕುರಿತಂತೆ ಪತ್ರ ವ್ಯವಹಾರ.

ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಕೆಲಸಕಾರ್ಯಗಳಿಗೆ ನೆರವಾಗುವುದು.

ತುರ್ತು ಸಂದರ್ಭಗಳಲ್ಲಿ ಆಡಳಿತಾತ್ಮಕ ವಿಷಯಗಳ ಕನ್ನಡ ಭಾಷಾಂತರ. ಕೇಂದ್ರ ಅಧಿನಿಯಮಗಳ ಭಾಷಾಂತರ ಪ್ರಗತಿ ಕುರಿತಂತೆ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ, ವರದಿಗಳ ಸಲ್ಲಿಕೆ.

ಶಾಖೆಯ ಮೇಲೆ ನಿಯಂತ್ರಣ, ಪರಿವೀಕ್ಷಣೆ ಮತ್ತು ಉಸ್ತುವಾರಿ.

**ಉಪ ನಿರ್ದೇಶಕರು: ನ್ಯಾಯಿಕ ವಿಷಯಗಳ ಭಾಷಾಂತರ ಶಾಖೆ:**

ನ್ಯಾಯಿಕ ವಿಷಯಗಳ ಭಾಷಾಂತರ ಶಾಖೆ ಮುಖ್ಯಸ್ಥರು

ಸರ್ಕಾರಿ ಆದೇಶಗಳು ಅಧಿಸೂಚನೆಗಳು, ನಿಯಮಗಳು, ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಕರ್ನಾಟಕ ಅಧಿನಿಯಮಗಳ ಅಡಿಯಲ್ಲಿ ಹೊರಡಿಸಿದ ನಿಯಮಗಳು, ನಿಬಂಧನೆಗಳು ಮತ್ತು ನಮೂನೆಗಳ ಇಂಗ್ಲೀಷ್ ಭಾಷಾಂತರ. ಆಡಳಿತ ವರದಿಗಳು, ವಿಚಾರಣಾ ಆಯೋಗದ ವರದಿಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಸರ್ವೋಚ್ಚ ನ್ಯಾಯಾಲಯದ ಮುಂದಿರುವ ವಿಶೇಷ ಅನುಮತಿ ಅರ್ಜಿಗಳಲ್ಲಿರುವ ಹೇಳಿಕೆಗಳು, ಸಾಕ್ಷಿಗಳ ಹೇಳಿಕೆಗಳು, ಪಾಟಿ ಸವಾಲುಗಳು, ಮಹಜರು, ಎಫ್‌ಐಆರ್‌ಗಳು, ಆರೋಪ ಪಟ್ಟಿಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಅಧೀನ ನ್ಯಾಯಾಲಯಗಳ ತೀರ್ಪುಗಳು, ಕರ್ನಾಟಕ ಆಡಳಿತ ನ್ಯಾಯ ಮಂಡಳಿ ವಿಷಯಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ತುರ್ತು ಸಂದರ್ಭಗಳಲ್ಲಿ ಆಡಳಿತಾತ್ಮಕ ವಿಷಯಗಳ ಕನ್ನಡ ಭಾಷಾಂತರ. ನ್ಯಾಯಿಕ ವಿಷಯಗಳ

ಭಾಷಾಂತರ ಕುರಿತಂತೆ ಸರ್ಕಾರದ ಇಲಾಖೆಗಳೊಂದಿಗೆ ಪತ್ರ ವ್ಯವಹಾರ. ನ್ಯಾಯಿಕ ವಿಷಯಗಳ ಭಾಷಾಂತರ ಪ್ರಗತಿ ಕುರಿತಂತೆ ಮಾಸಿಕ ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

ಶಾಖೆಯ ಮೇಲೆ ನಿಯಂತ್ರಣ, ಪರಿವೀಕ್ಷಣೆ ಮತ್ತು ಉಸ್ತುವಾರಿ.

**ಉಪ ನಿರ್ದೇಶಕರು : ರಾಜ್ಯ ಶಾಸನ ಶಾಖೆ**

ಶಾಖೆಯ ಮುಖ್ಯಸ್ಥರು

ರಾಜ್ಯ ಅಧಿನಿಯಮಗಳು, ನಿಯಮಗಳು ಮತ್ತು ತಿದ್ದುಪಡಿ ಅಧಿನಿಯಮಗಳ ಕನ್ನಡ ಭಾಷಾಂತರ.

ಸರ್ಕಾರದ ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳು, ಶಾಸನಾತ್ಮಕ ಆದೇಶಗಳು, ಅಧಿಸೂಚನೆಗಳು, ಸರ್ಕಾರಿ ಆದೇಶಗಳು, ಅಧಿಕೃತ ಜ್ಞಾಪನಗಳು, ಸುತ್ತೋಲೆಗಳು ಇತ್ಯಾದಿಗಳ ಕನ್ನಡ ಭಾಷಾಂತರ.

ರಾಜ್ಯ ಅಧಿನಿಯಮಗಳು, ನಿಯಮಗಳ ಭಾಷಾಂತರ ಕುರಿತಂತೆ ಪತ್ರ ವ್ಯವಹಾರ.

ಕರ್ನಾಟಕ ರಾಜಭಾಷಾ ಅಧಿನಿಯಮ, 1963ರ 5ಎ ಪ್ರಕರಣದ ಅಡಿಯಲ್ಲಿ ರಾಜ್ಯ ಅಧಿನಿಯಮಗಳ ಕನ್ನಡ ಆವೃತ್ತಿಗಳ ಮುದ್ರಣಕ್ಕೆ ಸಂಬಂಧಿಸಿದ ಎಲ್ಲ ಕೆಲಸ ಕಾರ್ಯಗಳ ನಿರ್ವಹಣೆ.

ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಕೆಲಸಕಾರ್ಯಗಳಿಗೆ ನೆರವಾಗುವುದು.

ರಾಜ್ಯ ಅಧಿನಿಯಮಗಳ ಕನ್ನಡ ಆವೃತ್ತಿಗಳ ಕರಡಚ್ಚು ಓದುವುದು, ತಾಳೆ ನೋಡುವುದು, ಅಡಿಟಿಪ್ಪಣಿಗಳ ಅಳವಡಿಕೆ ಇತ್ಯಾದಿ ಕಾರ್ಯಗಳ ನಿರ್ವಹಣೆ. ತುರ್ತು ಸಂದರ್ಭಗಳಲ್ಲಿ ಆಡಳಿತಾತ್ಮಕ ವಿಷಯಗಳ ಕನ್ನಡ ಭಾಷಾಂತರ. ರಾಜ್ಯ ಅಧಿನಿಯಮಗಳ ಭಾಷಾಂತರ ಪ್ರಗತಿ ಕುರಿತಂತೆ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ

ರಾಜ್ಯ ಶಾಸನ ಶಾಖೆಯ ಮೇಲೆ ನಿಯಂತ್ರಣ, ಪರಿವೀಕ್ಷಣೆ ಮತ್ತು ಉಸ್ತುವಾರಿ.

**ಸಹಾಯಕ ನಿರ್ದೇಶಕರು: ನ್ಯಾಯಿಕ ವಿಷಯಗಳ ಭಾಷಾಂತರ ಶಾಖೆ:**

ಸರ್ಕಾರಿ ಆದೇಶಗಳು ಅಧಿಸೂಚನೆಗಳು, ನಿಯಮಗಳು, ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಕರ್ನಾಟಕ ಅಧಿನಿಯಮಗಳ ಅಡಿಯಲ್ಲಿ ಹೊರಡಿಸಿದ ನಿಯಮಗಳು, ನಿಬಂಧನೆಗಳು ಮತ್ತು ನಮೂನೆಗಳ ಇಂಗ್ಲೀಷ್ ಭಾಷಾಂತರ. ಆಡಳಿತ ವರದಿಗಳು, ವಿಚಾರಣಾ ಆಯೋಗದ ವರದಿಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಸರ್ವೋಚ್ಚ ನ್ಯಾಯಾಲಯದ ಮುಂದಿರುವ ವಿಶೇಷ ಅನುಮತಿ ಅರ್ಜಿಗಳಲ್ಲಿರುವ ಹೇಳಿಕೆಗಳು, ಸಾಕ್ಷಿಗಳ ಹೇಳಿಕೆಗಳು, ಪಾಟಿ ಸವಾಲುಗಳು, ಮಹಜರು, ಎಫ್ ಐ ಆರ್ ಗಳು, ಆರೋಪ ಪಟ್ಟಿಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಅಧೀನ ನ್ಯಾಯಾಲಯಗಳ ತೀರ್ಪುಗಳು, ಕರ್ನಾಟಕ ಆಡಳಿತ ನ್ಯಾಯ ಮಂಡಳಿ ವಿಷಯಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ತುರ್ತು ಸಂದರ್ಭಗಳಲ್ಲಿ ಆಡಳಿತಾತ್ಮಕ ವಿಷಯಗಳ ಕನ್ನಡ ಭಾಷಾಂತರ. ನ್ಯಾಯಿಕ ವಿಷಯಗಳ ಭಾಷಾಂತರ ಕುರಿತಂತೆ ಸರ್ಕಾರದ ಇಲಾಖೆಗಳೊಂದಿಗೆ ಪತ್ರ ವ್ಯವಹಾರ. ನ್ಯಾಯಿಕ ವಿಷಯಗಳ ಭಾಷಾಂತರ ಪ್ರಗತಿ ಕುರಿತಂತೆ ಮಾಸಿಕ ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

**ಸಹಾಯಕ ನಿರ್ದೇಶಕರು: ರಾಜ್ಯ ಶಾಸನ ಶಾಖೆ**

ರಾಜ್ಯ ಅಧಿನಿಯಮಗಳು, ನಿಯಮಗಳು ಮತ್ತು ತಿದ್ದುಪಡಿ ಅಧಿನಿಯಮಗಳ ಕನ್ನಡ ಭಾಷಾಂತರ.

ಸರ್ಕಾರದ ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳು, ಶಾಸನಾತ್ಮಕ ಆದೇಶಗಳು, ಅಧಿಸೂಚನೆಗಳು, ಸರ್ಕಾರಿ ಆದೇಶಗಳು, ಅಧಿಕೃತ ಜ್ಞಾಪನಗಳು, ಸುತ್ತೋಲೆಗಳು ಇತ್ಯಾದಿಗಳ ಕನ್ನಡ ಭಾಷಾಂತರ.

ರಾಜ್ಯ ಅಧಿನಿಯಮಗಳು, ನಿಯಮಗಳ ಭಾಷಾಂತರ ಕುರಿತಂತೆ ಪತ್ರ ವ್ಯವಹಾರ.

ಕರ್ನಾಟಕ ರಾಜಭಾಷಾ ಅಧಿನಿಯಮ, 1963ರ 5ಎ ಪ್ರಕರಣದ ಅಡಿಯಲ್ಲಿ ರಾಜ್ಯ ಅಧಿನಿಯಮಗಳ ಕನ್ನಡ ಆವೃತ್ತಿಗಳ ಮುದ್ರಣಕ್ಕೆ ಸಂಬಂಧಿಸಿದ ಎಲ್ಲ ಕೆಲಸ ಕಾರ್ಯಗಳ ನಿರ್ವಹಣೆ.

ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಕೆಲಸಕಾರ್ಯಗಳಿಗೆ ನೆರವಾಗುವುದು.

ರಾಜ್ಯ ಅಧಿನಿಯಮಗಳ ಕನ್ನಡ ಆವೃತ್ತಿಗಳ ಕರಡಚ್ಚು ಓದುವುದು, ತಾಳೆ ನೋಡುವುದು, ಅಡಿಟಿಪ್ಪಣಿಗಳ ಅಳವಡಿಕೆ ಇತ್ಯಾದಿ ಕಾರ್ಯಗಳ ನಿರ್ವಹಣೆ. ತುರ್ತು ಸಂದರ್ಭಗಳಲ್ಲಿ ಆಡಳಿತಾತ್ಮಕ ವಿಷಯಗಳ ಕನ್ನಡ ಭಾಷಾಂತರ. ರಾಜ್ಯ ಅಧಿನಿಯಮಗಳ ಭಾಷಾಂತರ ಪ್ರಗತಿ ಕುರಿತಂತೆ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

**ಸಹಾಯಕ ನಿರ್ದೇಶಕರು:** ಆಡಳಿತಾತ್ಮಕ ವಿಷಯಗಳ ಭಾಷಾಂತರ ಶಾಖೆ

ಸರ್ಕಾರಿ ಆದೇಶಗಳು,ಅಧಿಸೂಚನೆಗಳು, ಅಧಿಕೃತ ಜ್ಞಾಪನಗಳು, ಶಾಸನಾತ್ಮಕ ಆದೇಶಗಳು, ಸುತ್ತೋಲೆಗಳು, ಕೆಸಿಎಸ್ಆರ್, ಕೆಎಫ್‌ಸಿ, ಕೆಟಿಸಿ, ಎಂಸಿಇ, ಬಜೆಟ್ ಕೈಪಿಡಿ ನಮೂನೆಗಳು, ಸಚಿವ ಸಂಪುಟದ ಟಿಪ್ಪಣಿಗಳು, ಇಲಾಖೆಗಳ ಕ್ರಿಯಾ ಯೋಜನೆಗಳು, ವಿಷಯ ಸಮಿತಿ ವರದಿಗಳು, ವಿಚಾರಣಾ ಆಯೋಗದ ವರದಿಗಳು, ವಾರ್ಷಿಕ ವರದಿಗಳು, ಸಿಎಜಿ ವರದಿಗಳು, ಪಿಎಸಿ ವರದಿಗಳು, ಉನ್ನತಾಧಿಕಾರದ ಸಮಿತಿಗಳು, ಇತರ ಸಮಿತಿಗಳ ವರದಿಗಳು, ರಾಜ್ಯ ನೀತಿ ವಿಷಯಗಳು ಇತ್ಯಾದಿಗಳ ಕನ್ನಡ ಭಾಷಾಂತರ, ಭಾಷಾಂತರ ಕಾರ್ಯ ಮತ್ತು ರವಾನೆ ಕುರಿತಂತೆ ಸರ್ಕಾರದ ಇಲಾಖೆಗಳೊಂದಿಗೆ ಪತ್ರ ವ್ಯವಹಾರ. ಆಡಳಿತಾತ್ಮಕ ವಿಷಯಗಳ ಭಾಷಾಂತರ ಪ್ರಗತಿ ಕುರಿತ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

**ಸಹಾಯಕ ನಿರ್ದೇಶಕರು : ಕೇಂದ್ರ ಶಾಸನ ಶಾಖೆ**

ಕೇಂದ್ರ ಅಧಿನಿಯಮಗಳ ಭಾಷಾಂತರ. ಕೇಂದ್ರ ಅಧಿನಿಯಮಗಳ ಭಾಷಾಂತರ ಕುರಿತಂತೆ ಕೇಂದ್ರ ಸರ್ಕಾರದ ಅಧಿಕೃತ ಭಾಷೆಗಳ ವಿಭಾಗದೊಂದಿಗೆ ಪತ್ರ ವ್ಯವಹಾರ. ಕೇಂದ್ರ ಅಧಿನಿಯಮಗಳ ಕರಡಚ್ಚುಗಳನ್ನು ಓದುವುದು, ತಾಳೆ ನೋಡುವುದು, ಅಡಿ ಟಿಪ್ಪಣಿಗಳ ಅಳವಡಿಕೆ ಇತ್ಯಾದಿ ಕೆಲಸಗಳ ನಿರ್ವಹಣೆ.

ಕೇಂದ್ರ ಶಾಸನಗಳ (ಅಧಿಕೃತ ಪಾಠಗಳ) ಅಧಿನಿಯಮ, 1973ರ 2(ಎ) ಪ್ರಕರಣದ ಅಡಿಯಲ್ಲಿ ಕೇಂದ್ರ ಅಧಿನಿಯಮಗಳ ಕನ್ನಡ ಆವೃತ್ತಿಗಳ ಮುದ್ರಣಕ್ಕೆ ಸಂಬಂಧಿಸಿದ ಎಲ್ಲ ಕೆಲಸ ಕಾರ್ಯಗಳ ನಿರ್ವಹಣೆ. ಕೇಂದ್ರ ಸರ್ಕಾರದ ಅಧಿಕೃತ ಭಾಷೆಗಳ ವಿಭಾಗದೊಂದಿಗೆ ಪತ್ರ ವ್ಯವಹಾರ. ರಾಜ್ಯ ಅಧಿನಿಯಮಗಳ ಕನ್ನಡ ಆವೃತ್ತಿಗಳ ಮುದ್ರಣ ಕುರಿತಂತೆ ಪತ್ರ ವ್ಯವಹಾರ.

ಕರ್ನಾಟಕ ರಾಜಭಾಷಾ (ವಿಧಾಯೀ) ಆಯೋಗದ ಕೆಲಸಕಾರ್ಯಗಳಿಗೆ ನೆರವಾಗುವುದು.

ತುರ್ತು ಸಂದರ್ಭಗಳಲ್ಲಿ ಆಡಳಿತಾತ್ಮಕ ವಿಷಯಗಳ ಕನ್ನಡ ಭಾಷಾಂತರ. ಕೇಂದ್ರ ಅಧಿನಿಯಮಗಳ ಭಾಷಾಂತರ ಪ್ರಗತಿ ಕುರಿತಂತೆ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

**ಸಂಶೋಧನಾಧಿಕಾರಿ: ಆಡಳಿತಾತ್ಮಕ ವಿಷಯಗಳ ಭಾಷಾಂತರ ಶಾಖೆ**

ಸರ್ಕಾರಿ ಆದೇಶಗಳು, ಅಧಿಸೂಚನೆಗಳು, ಅಧಿಕೃತ ಜ್ಞಾಪನಗಳು, ಸುತ್ತೋಲೆಗಳು, ಕೆಸಿಎಸ್‌ಆರ್,ಕೆಎಫ್‌ಸಿ, ಕೆಟಿಸಿ, ಎಂಸಿಇ, ಬಜೆಟ್ ಕೈಪಿಡಿ ನಮೂನೆಗಳು, ಸಚಿವ ಸಂಪುಟದ ಟಿಪ್ಪಣಿಗಳು, ಇಲಾಖೆಗಳ ಕ್ರಿಯಾ ಯೋಜನೆಗಳು, ವಿಷಯ ಸಮಿತಿ ವರದಿಗಳು, ವಿಚಾರಣಾ ಆಯೋಗದ ವರದಿಗಳು, ವಾರ್ಷಿಕ ವರದಿಗಳು, ಸಿಎಜಿ ವರದಿಗಳು, ಪಿಎಸಿ ವರದಿಗಳು, ಉನ್ನತಾಧಿಕಾರದ ಸಮಿತಿಗಳು, ಇತರ ಸಮಿತಿಗಳ ವರದಿಗಳು, ರಾಜ್ಯ ನೀತಿ ವಿಷಯಗಳು ಇತ್ಯಾದಿಗಳ ಕನ್ನಡ ಭಾಷಾಂತರ, ಭಾಷಾಂತರ ಕಾರ್ಯ ಮತ್ತು ರವಾನೆ ಕುರಿತಂತೆ ಸರ್ಕಾರದ ಇಲಾಖೆಗಳೊಂದಿಗೆ ಪತ್ರ ವ್ಯವಹಾರ / ಕಡತಗಳ ನಿರ್ವಹಣೆ. ಆಡಳಿತಾತ್ಮಕ ವಿಷಯಗಳ ಭಾಷಾಂತರ ಪ್ರಗತಿ ಕುರಿತ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

**ಸಂಶೋಧನಾಧಿಕಾರಿಗಳು: ನ್ಯಾಯಿಕ ವಿಷಯಗಳ ಭಾಷಾಂತರ ಶಾಖೆ**

ಸರ್ಕಾರಿ ಆದೇಶಗಳು ಅಧಿಸೂಚನೆಗಳು, ನಿಯಮಗಳು, ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಕರ್ನಾಟಕ ಅಧಿನಿಯಮಗಳ ಅಡಿಯಲ್ಲಿ ಹೊರಡಿಸಿದ ನಿಯಮಗಳು, ನಿಬಂಧನೆಗಳು ಮತ್ತು ನಮೂನೆಗಳ ಇಂಗ್ಲೀಷ್ ಭಾಷಾಂತರ. ಆಡಳಿತ ವರದಿಗಳು, ವಿಚಾರಣಾ ಅಯೋಗದ ವರದಿಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಸರ್ವೋಚ್ಚ ನ್ಯಾಯಾಲಯದ ಮುಂದಿರುವ ವಿಶೇಷ ಅನುಮತಿ ಅರ್ಜಿಗಳಲ್ಲಿರುವ ಹೇಳಿಕೆಗಳು, ಸಾಕ್ಷಿಗಳ ಹೇಳಿಕೆಗಳು, ಪಾಟಿ ಸವಾಲುಗಳು, ಮಹಜರು, ಎಫ್ ಐ ಆರ್ ಗಳು, ಆರೋಪ ಪಟ್ಟಿಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಅಧೀನ ನ್ಯಾಯಾಲಯಗಳ ತೀರ್ಪುಗಳು, ಕರ್ನಾಟಕ ಆಡಳಿತ ನ್ಯಾಯ ಮಂಡಳಿ ವಿಷಯಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ತುರ್ತುಸಂದರ್ಭಗಳಲ್ಲಿ ಆಡಳಿತಾತ್ಮಕ ವಿಷಯಗಳ ಕನ್ನಡ ಭಾಷಾಂತರ. ನ್ಯಾಯಿಕ ವಿಷಯಗಳ ಭಾಷಾಂತರ ಕುರಿತಂತೆ ಸರ್ಕಾರದ ಇಲಾಖೆಗಳೊಂದಿಗೆ ಪತ್ರ ವ್ಯವಹಾರ / ಕಡತಗಳ ನಿರ್ವಹಣೆ. ನ್ಯಾಯಿಕ ವಿಷಯಗಳ ಭಾಷಾಂತರ ಪ್ರಗತಿ ಕುರಿತಂತೆ ಮಾಸಿಕ ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

**ಸಂಶೋಧನಾಧಿಕಾರಿಗಳು, ರಾಜ್ಯ ಶಾಸನ ಶಾಖೆ**

ರಾಜ್ಯ ಅಧಿನಿಯಮಗಳು, ನಿಯಮಗಳು ಮತ್ತು ತಿದ್ದುಪಡಿ ಅಧಿನಿಯಮಗಳ ಕನ್ನಡ ಭಾಷಾಂತರ ಸರ್ಕಾರದ ಇಲಾಖೆಗಳ ವೃಂದ ಮತ್ತು ನೇಮಕಾತಿ ನಿಯಮಗಳು, ಶಾಸನಾತ್ಮಕ ಆದೇಶಗಳು, ಅಧಿಸೂಚನೆಗಳು, ಸರ್ಕಾರಿ ಆದೇಶಗಳು, ಅಧಿಕೃತ ಜ್ಞಾಪನಗಳು, ಸುತ್ತೋಲೆಗಳು ಇತ್ಯಾದಿಗಳ ಕನ್ನಡ ಭಾಷಾಂತರ.

ಕರ್ನಾಟಕ ರಾಜಭಾಷಾ ಅಧಿನಿಯಮ, 1963ರ 5ಎ ಪ್ರಕರಣದ ಅಡಿಯಲ್ಲಿ ರಾಜ್ಯ ಅಧಿನಿಯಮಗಳ ಕನ್ನಡ ಆವೃತ್ತಿಗಳ ಮುದ್ರಣಕ್ಕೆ ಸಂಬಂಧಿಸಿದ ಎಲ್ಲ ಕೆಲಸ ಕಾರ್ಯಗಳ ನಿರ್ವಹಣೆ.

ರಾಜ್ಯ ಅಧಿನಿಯಮಗಳು, ನಿಯಮಗಳ ಭಾಷಾಂತರ ಕುರಿತಂತೆ ಪತ್ರ ವ್ಯವಹಾರ/ ಕಡತಗಳ ನಿರ್ವಹಣೆ.

ರಾಜ್ಯ ಅಧಿನಿಯಮಗಳ ಕನ್ನಡ ಆವೃತ್ತಿಗಳ ಕರಡಚ್ಚು ಓದುವುದು, ತಾಳೆ ನೋಡುವುದು, ಅಡಿಟಿಪ್ಪಣಿಗಳ ಅಳವಡಿಕೆ ಇತ್ಯಾದಿ ಕಾರ್ಯಗಳ ನಿರ್ವಹಣೆ. ತುರ್ತು ಸಂದರ್ಭಗಳಲ್ಲಿ ಆಡಳಿತಾತ್ಮಕ ವಿಷಯಗಳ ಕನ್ನಡ ಭಾಷಾಂತರ. ರಾಜ್ಯ ಅಧಿನಿಯಮಗಳ ಭಾಷಾಂತರ ಪ್ರಗತಿ ಕುರಿತಂತೆ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

**ಸಂಶೋಧನಾಧಿಕಾರಿ, ಕೇಂದ್ರ ಶಾಸನ ಶಾಖೆ:**

ಕೇಂದ್ರ ಅಧಿನಿಯಮಗಳ ಕನ್ನಡ ಭಾಷಾಂತರ. ಕೇಂದ್ರ ಅಧಿನಿಯಮಗಳ ಭಾಷಾಂತರ ಕುರಿತಂತೆ ಕೇಂದ್ರ ಸರ್ಕಾರದ ಅಧಿಕೃತ ಭಾಷೆಗಳ ವಿಭಾಗದೊಂದಿಗೆ ಪತ್ರ ವ್ಯವಹಾರ / ಕಡತಗಳ ನಿರ್ವಹಣೆ. ಕೇಂದ್ರ ಅಧಿನಿಯಮಗಳ ಕರಡಚ್ಚುಗಳನ್ನು ಓದುವುದು, ತಾಳೆ ನೋಡುವುದು, ಅಡಿ ಟಿಪ್ಪಣಿಗಳ ಅಳವಡಿಕೆ ಇತ್ಯಾದಿ ಕೆಲಸಗಳ ನಿರ್ವಹಣೆ.

ಕೇಂದ್ರ ಶಾಸನಗಳ (ಅಧಿಕೃತ ಪಾಠಗಳ) ಅಧಿನಿಯಮ, 1973ರ 2(ಎ) ಪ್ರಕರಣದ ಅಡಿಯಲ್ಲಿ ಕೇಂದ್ರ ಅಧಿನಿಯಮಗಳ ಕನ್ನಡ ಆವೃತ್ತಿಗಳ ಮುದ್ರಣಕ್ಕೆ ಸಂಬಂಧಿಸಿದ ಎಲ್ಲ ಕೆಲಸ ಕಾರ್ಯಗಳ ನಿರ್ವಹಣೆ. ಕೇಂದ್ರ ಸರ್ಕಾರದ ಅಧಿಕೃತ ಭಾಷೆಗಳ ವಿಭಾಗದೊಂದಿಗೆ ಪತ್ರ ವ್ಯವಹಾರ / ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

**ಭಾಷಾಂತರಕಾರರು, : ಆಡಳಿತಾತ್ಮಕ ವಿಷಯಗಳ ಭಾಷಾಂತರ ಶಾಖೆ**

ಸರ್ಕಾರಿ ಆದೇಶಗಳು, ಅಧಿಸೂಚನೆಗಳು, ಅಧಿಕೃತ ಜ್ಞಾಪನಗಳು, ಶಾಸನಾತ್ಮಕ ಆದೇಶಗಳು, ಸುತ್ತೋಲೆಗಳು, ಕೆಸಿಎಸ್‌ಆರ್,ಕೆಎಫ್‌ಸಿ, ಕೆಟಿಸಿ, ಎಂಸಿಇ, ಬಜೆಟ್ ಕೈಪಿಡಿ ನಮೂನೆಗಳು, ಸಚಿವ ಸಂಪುಟದ ಟಿಪ್ಪಣಿಗಳು ಇಲಾಖೆಗಳ ಕ್ರಿಯಾ ಯೋಜನೆಗಳು, ವಿಷಯ ಸಮಿತಿ ವರದಿಗಳು, ವಿಚಾರಣಾ ಆಯೋಗದ ವರದಿಗಳು, ವಾರ್ಷಿಕ ವರದಿಗಳು, ಸಿಎಜಿ ವರದಿಗಳು, ಪಿಎಸಿ ವರದಿಗಳು, ಉನ್ನತಾಧಿಕಾರದ ಸಮಿತಿಗಳು, ಇತರ ಸಮಿತಿಗಳ ವರದಿಗಳು, ರಾಜ್ಯ ನೀತಿ ವಿಷಯಗಳು ಇತ್ಯಾದಿಗಳ ಕನ್ನಡ ಭಾಷಾಂತರ, ಭಾಷಾಂತರ ಕಾರ್ಯ ಮತ್ತು ರವಾನೆ ಕುರಿತಂತೆ ಸರ್ಕಾರದ ಇಲಾಖೆಗಳೊಂದಿಗೆ ಪತ್ರ ವ್ಯವಹಾರ ಕಡತಗಳ ನಿರ್ವಹಣೆ. ಆಡಳಿತಾತ್ಮಕ ವಿಷಯಗಳ ಭಾಷಾಂತರ ಪ್ರಗತಿ ಕುರಿತ ಮಾಸಿಕ, ತ್ರೈಮಾಸಿಕ, ಅರ್ಧವಾರ್ಷಿಕ, ವಾರ್ಷಿಕ ವರದಿಗಳ ಕಡತಗಳ ನಿರ್ವಹಣೆ ವರದಿಗಳ ಸಲ್ಲಿಕೆ.

**ಭಾಷಾಂತರಕಾರರು: ನ್ಯಾಯಿಕ ವಿಷಯಗಳ ಭಾಷಾಂತರ ಶಾಖೆ**

ಸರ್ಕಾರಿ ಆದೇಶಗಳು ಅಧಿಸೂಚನೆಗಳು, ನಿಯಮಗಳು, ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ. ಕರ್ನಾಟಕ ಅಧಿನಿಯಮಗಳ ಅಡಿಯಲ್ಲಿ ಹೊರಡಿಸಿದ ನಿಯಮಗಳು, ನಿಬಂಧನೆಗಳು ಮತ್ತು ನಮೂನೆಗಳ ಇಂಗ್ಲೀಷ್ ಭಾಷಾಂತರ. ಆಡಳಿತ ವರದಿಗಳು, ವಿಚಾರಣಾ ಆಯೋಗದ ವರದಿಗಳು ಇತ್ಯಾದಿಗಳ ಇಂಗ್ಲೀಷ್ ಭಾಷಾಂತರ, ಸರ್ವೋಚ್ಚ ನ್ಯಾಯಾಲಯದ ಮುಂದಿರುವ ವಿಶೇಷ ಅನುಮತಿ ಅರ್ಜಿಗಳಲ್ಲಿರುವ ಹೇಳಿಕೆಗಳು, ಸಾಕ್ಷಿಗಳ ಹೇಳಿಕೆಗಳು, ಪಾಟಿ ಸವಾಲುಗಳು, ಮಹಜರು, ಎಫ್ ಐ ಆರ್ ಗಳು, ಆರೋಪ ಪಟ್ಟಿಗಳು

